TRAVEL PAGE

# ಪ್ರವಾಸ 2015

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ಚಾರೋಧಾಮ್ - ಕಾಶಿ - ಗಯಾ : 19/26 ದಿನಗಳು

**Sep 18 Oct 06**

ಹರಿದ್ವಾರ, ಯಮುನೋತ್ರಿ, ಗಂಗೋತ್ರಿ, ಉತ್ತರಕಾಶಿ, ಕೇದಾರ, ತ್ರಿಯುಗಿ (Optional), ಮಾನಾ, ವ್ಯಾಸ ಗುಹ, ಗಣೇಶ ಗುಹ, ಕೇಶವ ಪ್ರಯಾಗ್, ಬದರಿ, ಋಷಿಕೇಶ್, ನವದೆಹಲಿ, ಅಲಹಾಬಾದ್, ಅಯೋಧ್ಯಾ, ಸಾರಾನಾಥ್, ಗಯಾ, ಬುದ್ಧಗಯಾ, ಕಾಶಿ

### ದ್ವಾರಕ ಮತ್ತು ಜ್ಯೋತಿರ್ಲಿಂಗ : 24 ದಿನಗಳು

**Oct 25 Nov 15**

ಪುಷ್ಕರ, ಅಜ್ಮೀರ್, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಎಲ್ಲೋರ, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್.

### ಶಕ್ತಿಪೀಠ ಮನಾಲಿ ಸ್ಪೆಷಲ್ : 18 ದಿನಗಳು

**Oct 23**

ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ವೈಷ್ಣವೀದೇವಿ, ಚಾಮುಂಡ, ಖಾಂಘ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಬೈಜ್‌ನಾಥ್, ಕುಲು-ಮನಾಲಿ, ವಶಿಷ್ಠ, ರೋತಾಂಗ್ ಪಾಸ್ (Optional), ನೈನಾದೇವಿ, ಕುಫ್ರಿ, ಸಿಮ್ಲಾ, ಚಂಡೀಘರ್, ಕುರುಕ್ಷೇತ್ರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ : 16 ದಿನಗಳು

**Sep 22 Nov 18**

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

### ದಕ್ಷಿಣ ಭಾರತ : 10 ದಿನಗಳು

**Aug 26 Nov 25**

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕೋವಲಂ ಬೀಚ್, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ ದೇವಸ್ಥಾನಗಳು

ವ್ಯವಸ್ಥಾಪಕ ಸಂಪಾದಕರು
ಸ್ವಾಮಿ ಮುಕ್ತಿದಾನಂದ
ಸಂಪಾದಕರು
ಸ್ವಾಮಿ ಜ್ಞಾನಯೋಗಾನಂದ
ನೆರವು:
ಆರ್. ಎಸ್. ಪೂರ್ಣಾನಂದ
ಡಾ. ಕೆ. ಎಲ್. ಪ್ರಸನ್ನಾಕ್ಷಿ
ಡಾ. ಎಚ್. ಪಾಂಡುರಂಗ ವಿಠಲ

ಅಕ್ಷರ ಜೋಡಣೆ
ಶ್ರೀರಾಮಕೃಷ್ಣ ಆಶ್ರಮ, ಮೈಸೂರು
ಮುದ್ರಣ
ಮಯೂರ್ ಗ್ರಾಫಿಕ್ಸ್, ಬೆಂಗಳೂರು

E-mail:
vivekaprabha@hotmail.com
kannada.vivekaprabha@gmail.com
Website: vivekaprabha.net
ಫೋನ್ : 9481533505

ಮುಖಪುಟ:
ಮಾನಸ ಸರೋವರ

ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– ಸ್ವಾಮಿ ವಿವೇಕಾನಂದ

ಚಂದಾ ವಿವರ

ಬಿಡಿ ಪ್ರತಿ : ₹ 14
ವಾರ್ಷಿಕ : ₹ 140
ಮೂರು ವರ್ಷ : ₹ 375
ಆಜೀವ (25 ವರ್ಷ): ₹ 3,000
ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ : (ಏರ್‌ಮೇಲ್)
ವಾರ್ಷಿಕ : $ 20; ಮೂರು ವರ್ಷ : $ 60
ಆಜೀವ (25ವರ್ಷ): $ 300
ಪೋಷಕರು : $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

ಆಗಸ್ಟ್-2015 ಸಂಪುಟ 16 ಸಂಚಿಕೆ 08



# ವಿವೇಕ ಪ್ರಭ

ಪರಿವಿಡಿ













ಲವಣ ಎನ್ನುವ ರಾಜನಿದ್ದನು. ಅವನು ಹರಿಶ್ಚಂದ್ರನ ವಂಶದಲ್ಲಿ ಹುಟ್ಟಿದವನು; ಉತ್ತರ ಪಾಂಡವ ಎನ್ನುವ ರಾಜ್ಯವನ್ನು ಆಳುತ್ತಿದ್ದನು. ಅವನೊಬ್ಬ ಬಹು ದೊಡ್ಡ ರಾಜ....





# ಪ್ರಾರ್ಥನೆ

# ದಕ್ಷಿಣೇಶ್ವರದ ದೇವಿಯನ್ನು ಕುರಿತು



ಭವತಾರಿಣೀ ಮಾತೆ, ದೇವಿ, ಮಹಾಮಾಯೆ,
ಶ್ರೀರಾಮಕೃಷ್ಣ ಗುರುವರನಂದು ಅರ್ಚಿಸಿದ,
ಅವನ ಚೇತನದ ಮುಕ್ತಿಯ ನೆಲೆಗಮರ್ಚಿಸಿದ,
ನಿನ್ನ ಆನಂದಮೂರ್ತಿಯ ನೋಡಿದೆನು ತಾಯೆ,
ಧನ್ಯವಾಯಿತು ನೋಟ, ಭಾವ ಮೂಕತೆ ಬಾಯ
ಮುಚ್ಚಿರುವುದೀಗ; ಕಣ್ಣಲ್ಲಿ ನೀರು ತುಂಬಿಹುದು;
ನೀನೆ ಗತಿಯೆಂದು ಮನ ಕ್ಷಣಮಾತ್ರ ನಂಬಿಹುದು;
ಎನ್ನನುದ್ಧರಿಸು ದೇವಿ ತಾಯೆ ನಿರಪಾಯೆ.
ನೀನಿತ್ತ ಮೆಯ್ಯ ರತ್ನದ ಪಂಜರದೊಳಿರುತ
ಎನ್ನುಸಿರ ಬಿಳಿಯ ಗಿಳಿ ರಕ್ತವರ್ಣಕೆ ಬೆಳೆದು
ರೂಪ ಮೃಗತೃಷ್ಣೆಯಲಿ ತೊಳಲುತಿದೆಯೌ, ಎನ್ನ
ಆಸೆಗಳ ತೊಳೆ ದೇವಿ, ತೊಳೆಯವ್ವ ಕಣ್ಣ.
ಎಲ್ಲ ಹೆಣ್ಣಾಕೃತಿಯೊಳಿಂತೆಯೇ ಹೊಳೆದು
ಪೂಜೆಯನೆ ಸಲಿಸಿಕೊಳು ಎನ್ನಿಂದ ನಿರುತ.

- ಶ್ರೀನಿವಾಸ

*(ಮಾಸ್ತಿ ವೆಂಕಟೇಶ ಅಯ್ಯಂಗಾರ್)*

# ಸೂಕ್ತಿಪ್ರಭ

# ಕಬೀರನ ಸೂಕ್ತಿಗಳು

- ಆಳವಾಗಿ ಮನಸ್ಸಿನಲ್ಲಿ ಚಿಂತಿಸಿನೋಡು: ಗೋವಿಂದನಿಗಿಂತಲೂ ಗುರುವೇ ಶ್ರೇಷ್ಠನು. ಏಕೆಂದರೆ, ದೇವರ ಸೃಷ್ಟಿಯಲ್ಲಿ ಪುನರ್ಜನ್ಮವಿದೆ; ಆದರೆ ಗುರುವಿನ ಕೃಪೆ ಅದನ್ನು ದಾಟಿಸುವುದು.
- ಕುಷ್ಠರೋಗಿಯ ಚರ್ಮದಿಂದ ಕೀವು ಹೊರಬರುತ್ತಿರಲಿ, ಅವನು ರಾಮನಾಮವನ್ನು ಜಪಿಸುತ್ತಿದ್ದರೆ ಅವನೇ ಉತ್ತಮನು. ರಾಮನಾಮ ಜಪಿಸದವನಿಗೆ ಚಿನ್ನದ ದೇಹವಿದ್ದರೂ ಅದರಿಂದೇನು ಲಾಭ?
- ಸತ್ಯವನ್ನು ಶಾಪ ಸ್ಪರ್ಶಿಸದು, ಅದನ್ನು ಕಾಲವೂ ನಾಶ ಮಾಡದು. ಸತ್ಯದ ಪಥದಲ್ಲಿ ನಿಜವಾಗಿಯೂ ನಡೆಯುವವನನ್ನು ಯಾರು ನಾಶ ಮಾಡಬಲ್ಲರು?
- ಮನಸ್ಸು ಅಲೆದಾಡುತ್ತಿದ್ದರೆ, ಅದನ್ನು ಸ್ವಚ್ಛಂದ ಬಿಟ್ಟುಬಿಡು. ಆದರೆ ಶರೀರವನ್ನು ಬಿಗಿಯಾಗಿ ಹಿಡಿ. ಬಿಲ್ಲಿಗೆ ಸೇರಿಸಿ, ಬಿಗಿಯಾಗಿ ಹಿಡಿಯದಿದ್ದರೆ ಬಾಣ ಬಿಡುವುದಾದರೂ ಹೇಗೆ?
- 'ನಾರಿ ನರಕಕ್ಕೆ ದಾರಿ' ಎನ್ನಬೇಡ. ಆಕೆ ಸಂತರಿಗೆ ಜನ್ಮ ಕೊಟ್ಟವಳು. ಭಕ್ತರನ್ನು ಹಡೆಯುವ ಆಕೆ ರತ್ನಗಳ ಗಣಿಯಾಗಿರುವಳು.
- ನಿಧಾನ, ನಿಧಾನವಾಗಿ ಎಲ್ಲವೂ ಸಂಭವಿಸುವುದು, ಎಲೈ ಮನಸ್ಸೆ! ತೋಟಗಾರ ನೂರು ಕೊಡ ನೀರನ್ನು ಗಿಡಕ್ಕೆ ಎರೆಯುತ್ತಾನೆ. ಆದರೆ ಅದು ಹಣ್ಣು ಬಿಡುವುದು ಸರಿಯಾದ ಋತು ಬಂದಾಗ ಮಾತ್ರ.



# ವಿವೇಕಪ್ರಭ

## ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು.......................................................................

ವಿಳಾಸ.............................................................................

....................................................................................

.....................................................ಪಿನ್...........................

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು.............................................................................

ವಿಳಾಸ............................................................................

....................................................................................

.....................................................ಪಿನ್...........................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.

ವಿವರ.......................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ



ಯಾವುದಕ್ಕೂ ಅಂಜಬೇಡಿ. ನೀವು ಅದ್ಭುತವಾದ ಕೆಲಸವನ್ನು ಸಾಧಿಸುವಿರಿ. ಅಂಜಿದೊಡನೆ ನೀವು ಯಾವುದಕ್ಕೂ ಪ್ರಯೋಜನವಿಲ್ಲ. ಪ್ರಪಂಚದ ವ್ಯಥೆಗೆ ದೊಡ್ಡ ಕಾರಣವೇ ಅಂಜಿಕೆ. ಅಂಜಿಕೆಯೇ ಎಲ್ಲದಕ್ಕಿಂತ ದೊಡ್ಡ ಮೂಢನಂಬಿಕೆ. ನಮ್ಮ ದುಃಖಕ್ಕೆ ಕಾರಣ ಅಂಜಿಕೆ. ನಿರ್ಭಯತೆಯೇ ಈ ಕ್ಷಣದಲ್ಲಿ ನಮಗೆ ಸ್ವರ್ಗವನ್ನು ತರಬಲ್ಲುದು. ಆದ ಕಾರಣವೇ, ''ಏಳಿ, ಜಾಗೃತರಾಗಿ, ಗುರಿ ಸೇರುವವರೆಗೂ ನಿಲ್ಲಬೇಡಿ.''

ಬಲಿಷ್ಠನಾಗಿ ಎದ್ದುನಿಲ್ಲು. ಪ್ರೇಮೇಶ್ವರನನ್ನು ಅರಸು. ಅವನೇ ಶ್ರೇಷ್ಠವಾದ ಬಲ. ಪವಿತ್ರತೆಯ ಶಕ್ತಿಗಿಂತ ಮೇಲಾಗಿರುವುದು ಯಾವುದಿದೆ? ಪ್ರೇಮ ಮತ್ತು ಪವಿತ್ರತೆ ಇವೆರಡೇ ಪ್ರಪಂಚವನ್ನು ಆಳುವುದು. ಭಗವಂತನ ಪ್ರೇಮವನ್ನು ಬಲಹೀನರು ಪಡೆಯಲಾರರು. ಆದ ಕಾರಣ ಶಾರೀರಿಕವಾಗಿ ಆಗಲಿ, ಮಾನಸಿಕವಾಗಿ ಆಗಲಿ, ನೈತಿಕವಾಗಿ ಆಗಲಿ, ಆಧ್ಯಾತ್ಮಿಕವಾಗಿ ಆಗಲಿ ಎಂದಿಗೂ ದುರ್ಬಲರಾಗಬೇಡಿ.

–ಸ್ವಾಮಿ ವಿವೇಕಾನಂದ

ಸಂಪಾದಕೀಯ



# ಅನಂತ ಪಯಣ

ಹುಡುಗನೊಬ್ಬ ನಡೆಯುತ್ತಿದ್ದಾನೆ. ಸುತ್ತ ವಿಶಾಲವಾದ ಹಚ್ಚ ಹಸಿರಿನ ಬಯಲು; ಮೇಲೆ ಅನಂತ ನೀಲಾಕಾಶ. ಇದ್ದಕ್ಕಿದ್ದಂತೆ ಬೆಳ್ಳಕ್ಕಿಗಳ ಸಾಲು ಮಾಲೆಮಾಲೆಯಾಗಿ ಹಾರಿ ಬಂತು. ಹುಡುಗನ ಭಾವುಕ ಮನಸ್ಸು ಸೃಷ್ಟಿಯ ವಿಸ್ಮಯದಲ್ಲಿ ತಲ್ಲೀನವಾಯಿತು. ಲೌಕಿಕ ಚಿತ್ರದ ಮೂಲಕ ಅನಂತದ ಸೂಚನೆ ಮನಸ್ಸಿಗೆ ಬಂದುದೇ ತಡ, ಆತ ಅಲೌಕಿಕ ಜಗತ್ತಿನ ಅನಂತ ವಿಸ್ಮಯದಲ್ಲಿ ಒಂದಾಗಿಬಿಟ್ಟ. ಮನಸ್ಸು ಕೊನೆಯಿಲ್ಲದ ರಾಜ್ಯದಲ್ಲಿ ಪಯಣಿಸತೊಡಗಿತು. ಹುಡುಗ ಮೈಮರೆತು, ಪ್ರಜ್ಞೆ ತಪ್ಪಿ ಬಿದ್ದುಬಿಟ್ಟ.

ಶ್ರೀರಾಮಕೃಷ್ಣರ ಬಾಲ್ಯದ ಅನುಭವದಂತೆಯೇ ಮಹಾತ್ಮರ ಬದುಕಿನಲ್ಲಿ ಅನೇಕ ಘಟನೆಗಳು ಕಂಡುಬರುತ್ತವೆ. ಪ್ರಪಂಚದ ಒಂದು ಸಣ್ಣ ಸೂಚನೆ ಸಿಕ್ಕರೆ ಸಾಕು, ಅವರ ಮನಸ್ಸು ಭಾವರಾಜ್ಯದಲ್ಲಿ ವಿಹರಿಸತೊಡಗುತ್ತದೆ. ಶ್ರೀಚೈತನ್ಯ ಮಹಾಪ್ರಭು ಕಾರ್ಮುಗಿಲನ್ನು ಕಂಡೊಡನೆ ಅವನಿಗೆ ಕೃಷ್ಣನ ನೆನಪಾಗಿ, ಅವನು ಸಮಾಧಿಯ ಸ್ಥಿತಿಗೇರುತ್ತಿದ್ದ. ಇಲ್ಲಿ ಆಶ್ಚರ್ಯದ ಸಂಗತಿಯೆಂದರೆ, ಅನಂತದ ಸೂಚಕವೆಲ್ಲ ಈ ಸಾಂತವಾದ ಜಗತ್ತಿನ ಕ್ಷುಲ್ಲಕ ವಸ್ತುಗಳಲ್ಲೇ ಇವೆಯಲ್ಲ ಎಂಬುದು. ಆದರೆ ಅಂಥ ವಸ್ತು, ವಿಷಯಗಳು ನೆಪಮಾತ್ರ; ನಿಜವಾದ ಭಾವಪ್ರೇರಕ ವಸ್ತು ಹೃದಯದಲ್ಲಿ ಅಡಗಿದೆ ಎಂಬ ಸತ್ಯವೇ ಮುಖ್ಯವಾದದ್ದು.

ಹರಿಯುವ ನೀರನ್ನೇ ನೋಡುತ್ತಿದ್ದರೆ ಮನಸ್ಸು ಏಕಾಗ್ರಗೊಳ್ಳುತ್ತದೆ ಎಂದು ಸ್ವಾಮಿ ಅದ್ಭುತಾನಂದರು ಹೇಳುತ್ತಿದ್ದರು. ಕೊನೆಯಿಲ್ಲದ ಹರಿಯುವಿಕೆ, ಅದಕ್ಕೆ ವಿಭಿನ್ನ ರೀತಿಯಲ್ಲಿ ತಟಸ್ಥವಾಗಿರುವ ನೆಲ, ಮನಸ್ಸಿನ ಚಂಚಲ ಪ್ರಕೃತಿಯನ್ನು ಒಂದೆಡೆ ಹಿಡಿದು ನಿಲ್ಲಿಸುತ್ತದೆ. ಇದೇ ರೀತಿ ನಿರಂತರ ಸುರಿಯುವ ಮಳೆ, ಒಂದರ ಮೇಲೊಂದರಂತೆ ಎದ್ದು ಬರುವ ಸಮುದ್ರದ ಅಲೆಗಳು, ದಿಗಂತದ ಅಂಚಿನವರೆಗೂ ಹಬ್ಬಿರುವ ಹಿಮಾಲಯ ಪರ್ವತದ ಉನ್ನತೋನ್ನತ ಶಿಖರಗಳು, ಕೊನೆಯಿಲ್ಲದೆ ಹಬ್ಬಿರುವ, ವೈವಿಧ್ಯಮಯವಾದ ಹಸಿರು ಅರಣ್ಯ – ಹೀಗೆ ನಿಸರ್ಗದ ಹಲವು ನೋಟಗಳು ಅನಂತ ಸೂಚಕವಾದ ಭಾವವನ್ನು ಉಕ್ಕಿಸುತ್ತವೆ. ಮನಸ್ಸು ಯಾವಾಗ ಸೀಮಿತ ದೃಷ್ಟಿಯನ್ನು ಮೀರಿ ಅಗೋಚರದ ಅನಂತ ಸಾಮ್ರಾಜ್ಯದತ್ತ ಹೊರಳುವುದೋ, ಕೊನೆಯಿಲ್ಲದ ಸತ್ಯದ ದರ್ಶನಕ್ಕಾಗಿ ಹಪಹಪಿಸುವುದೋ, ಆಗ ಸಣ್ಣ ಸೂಚಕ ದೃಶ್ಯಗಳೂ ಮನಸ್ಸನ್ನು ಅಸಾಧಾರಣ ಭವ್ಯತೆಗೇರಿಸುವುದು.

## ಸಾಧಾರಣ ನೋಟ – ಸಾಮಾನ್ಯ ಬದುಕಿನಲ್ಲಿ

ಆಧ್ಯಾತ್ಮಿಕವಾಗಿ ಉನ್ನತ ಹಂತವನ್ನೇರಿದವರಿಗೆ ಇಂಥ ಸೂಚಕಗಳು ದೈವೀಪ್ರೇರಣೆಯನ್ನು ಉಂಟುಮಾಡಬಹುದು. ಆದರೆ ಅನಂತ ಅಸ್ತಿತ್ವದ ಭಾವನೆ ಕೇವಲ ಅವರಿಗಷ್ಟೇ ಸೀಮಿತವಲ್ಲ. ಮನುಷ್ಯನ ಮನಸ್ಸು ಯಾವ ಹಂತದಲ್ಲೇ ಇರಲಿ, ಅದರ ಶಕ್ತಿ, ಸಾಮರ್ಥ್ಯಗಳಿಗೆ ಮಿತಿಯೆಂಬುದಿಲ್ಲ. ಅಂತೆಯೇ ಭಾವಗಳಿಗೆ, ಅನುಭವಗಳಿಗೆ ಕೊನೆಯೆಂಬುದಿಲ್ಲ ; ನಮ್ಮಲ್ಲಿ ನಿರಂತರ ನಡೆಯುತ್ತಿರುವ ಗ್ರಹಿಕೆ, ಅರ್ಥೈಸುವಿಕೆ, ವಿವಿಧ ಸಂವೇದನೆಗಳು ನಿರಂತರ ಸರಣಿಯಂತೆ ಬರುತ್ತಿರುತ್ತವೆ; ಅವೆಲ್ಲದರ ಒಟ್ಟು ಪರಿಣಾಮವಾಗಿ ನಮ್ಮ ಅನುಭವಗಳನ್ನು ನಾವು ಅಳೆಯುತ್ತೇವೆ. ಇಲ್ಲಿ ಪ್ರಧಾನ ಅಂಶವೆಂದರೆ, ಈ ನಿರಂತರ ಪ್ರಕ್ರಿಯೆಯ ನಡುವೆ ನಮ್ಮೊಳಗಿನಿಂದ ಬಂದ ನಮ್ಮ ಇಚ್ಛೆ , ಆಶೋತ್ತರ ಹಾಗೂ ಅಭಿರುಚಿಗಳು ಕೂಡ ತಮ್ಮ ಪಾಲಿನ ಕೊಡುಗೆ ನೀಡುತ್ತವೆ. ಅನೇಕ ವೇಳೆ ನಮ್ಮ ದೈನಂದಿನ ಸುಖ, ದುಃಖ ಹಾಗೂ ಏರುಪೇರುಗಳು ಪ್ರಪಂಚದ 'ಸೂಚಕ' ಗಳನ್ನು ಆವರಿಸಿಬಿಡುತ್ತವೆ; ಅವುಗಳನ್ನು ನಾವು ಕಂಡೂ ಕಾಣದಂತೆ ಇದ್ದುಬಿಡುತ್ತೇವೆ.

## ಅಗೋಚರ ಆಳ

ಶ್ರೀರಾಮಕೃಷ್ಣರು ಒಂದು ಉಪಮೆಯನ್ನು ನೀಡುತ್ತಾರೆ. ನೀರಿನಲ್ಲಿ ಮಂಜುಗಡ್ಡೆ ತೇಲುತ್ತಿರುತ್ತದೆ. ಅದರ ತಲೆ ಮಾತ್ರ ಕಾಣಿಸುತ್ತದೆ; ಅಷ್ಟರಿಂದ ನೀರಿನೊಳಗೆ ಎಷ್ಟು ಭಾಗ ಮುಳುಗಿದೆ ಎಂದು ಗೊತ್ತಾಗುವುದಿಲ್ಲ. ಅದನ್ನು ನೀರಿನಿಂದ ಹೊರಕ್ಕೆ ತೆಗೆದಾಗ, ಮುಕ್ಕಾಲು ಭಾಗ ಮಂಜುಗಡ್ಡೆ ನೀರಿನಲ್ಲಿ ಮರೆಯಾಗಿತ್ತು ಎಂಬುದನ್ನು ಕಂಡು ನಾವು ಆಶ್ಚರ್ಯಪಡುತ್ತೇವೆ. ಭಗವಂತನ ಅಸ್ತಿತ್ವ ಹೀಗೆ – ಅವನ ಯಾವುದೋ ಒಂದಂಶವನ್ನು ಮಾತ್ರ ಮನುಷ್ಯ

ಕಂಡುಕೊಳ್ಳುವನು, ಅಷ್ಟಕ್ಕೇ ಅವನು ಎಲ್ಲವನ್ನೂ ಮರೆತು ಭಗವಂತನಲ್ಲಿ ಲಯವಾಗುವನು. ಭಗವಂತನ ಅನಂತ ಅಸ್ತಿತ್ವ, ಅವನ ನೆಲೆ, ಅವನ ವಿಸ್ತಾರ ಇವನ್ನು ಯಾರಿಂದಲೂ ಅಳೆಯಲಾಗದು ಎನ್ನುತ್ತಾರೆ ಶ್ರೀರಾಮಕೃಷ್ಣರು.

ಈ ವಿಶ್ವವೂ ಭವಂತನ ಸೃಷ್ಟಿ, ಆದ್ದರಿಂದ ಎಲ್ಲ ವಸ್ತುಗಳ ಅಂತರಂಗದಲ್ಲಿ ಭಗವಂತನೇ ಅಡಗಿದ್ದಾನೆ ಎಂದು ಶಾಸ್ತ್ರಗ್ರಂಥಗಳು ಹೇಳುತ್ತವೆ. ಆದರೆ ಅದು ಸತ್ಯವಾಗಿ ಗೋಚರಿಸುವುದು ಭಗವಂತನನ್ನು ಕಂಡವನಿಗೆ; **'ಸರ್ವಂ ಖಲ್ವಿದಂ ಬ್ರಹ್ಮ'** ಎಂಬ ದರ್ಶನವನ್ನು ಪಡೆದವನಿಗೆ. ಉಳಿದವರ ಪಾಲಿಗೆ ಪ್ರಪಂಚ ಸಾಂತವಾದುದು, ಬದಲಾಗುವಂಥದ್ದು, ಎಲ್ಲ ವೈವಿಧ್ಯ ಹಾಗೂ ಗುಣಗಳಿಂದ ಕೂಡಿದ್ದು; ಅನುಭವಗಮ್ಯವಾದದ್ದು. ಪ್ರಪಂಚದಂತೆಯೇ ಜೀವಿಗಳೂ ಭಗವಂತನಿಂದಲೇ ಸೃಷ್ಟಿಸಲ್ಪಟ್ಟಿವೆ; ಅವನ ಲಕ್ಷಣಗಳನ್ನೇ ಹೊಂದಿವೆ – ಇದನ್ನೂ ವೇದಾಂತವೇ ಹೇಳುತ್ತದೆ. ಈ ಕಾರಣದಿಂದಲೇ ನಮ್ಮ ಮೂಲ ಸ್ವರೂಪ 'ದಿವ್ಯ'ವಾದದ್ದು. ಸಾಧನೆಯ ಮೂಲಕ ನಮ್ಮ ಮಿತಿಗಳನ್ನು ದಾಟಿ ಎಲ್ಲ ಸೃಷ್ಟಿಗೆ, ಅಸ್ತಿತ್ವಕ್ಕೆ ಮೂಲವಾದ ಭಗವಂತನನ್ನು ಸೇರಬಹುದು. ಈ ಕಾರಣದಿಂದ ಸಾಂತದಲ್ಲಿ ಅನಂತವನ್ನೂ, ನಶ್ವರವಾದುದರಲ್ಲಿ ಶಾಶ್ವತವನ್ನೂ, ಕ್ಷಣಿಕವಾದುದರಲ್ಲಿ ಕೊನೆಯಿಲ್ಲದ್ದನ್ನೂ ಕಾಣುವುದು ನಮಗೆ ಸಾಧ್ಯ. ಆದರೆ ನಮ್ಮ ದೃಷ್ಟಿ ಲೌಕಿಕ ಮಿತಿಯನ್ನು ದಾಟಬೇಕು; ಪ್ರಪಂಚದ 'ಸೂಚಕ' ಗಳನ್ನು ಅನಂತದೆಡೆಗೆ ವಿಸ್ತರಿಸಬೇಕು; ದಿವ್ಯದರ್ಶನವಾಗುವವರೆಗೂ ಅದನ್ನು ಮುಂದುವರೆಸಬೇಕು.

## ಅನಂತತೆಯ ನೋಟ – ಬದುಕಿನ ಪರಿಛಿತದಲ್ಲಿ

ದೈನಂದಿನ ಬದುಕು, ನಾವು ನಿರೀಕ್ಷಿಸದೆ ಇರುವಂತಹ ಕೆಲವು ಸನ್ನಿವೇಶಗಳನ್ನು ತಂದೊಡ್ಡುತ್ತದೆ. ಹಲವು ವೇಳೆ ನಾವು ಅದನ್ನು ಗ್ರಹಿಸುವ ಬಗೆ, ಅವುಗಳಿಗೆ ನೀಡುವ ಪ್ರತಿಕ್ರಿಯೆ ಅವುಗಳ ಪರಿಣಾಮವನ್ನು ನಿರ್ಧರಿಸುತ್ತದೆ. ಆದ್ದರಿಂದ ನಿರ್ಣಾಯಕ ಹಂತವೆಂದರೆ ಇದೇ – ನಾವು ಹೇಗೆ ಈ ಸನ್ನಿವೇಶವನ್ನು ನೋಡುತ್ತೇವೆ, ಹೇಗೆ ಅದನ್ನು ಎದುರಿಸುತ್ತೇವೆ ಎಂಬುದು. ಇಂಥ ಸನ್ನಿವೇಶಗಳಲ್ಲಿ ಮೂಡಿಬರುವ ಭಾವನೆ, ಅರ್ಥಗಳು ಒಂದೇ ರೀತಿ ಇಲ್ಲದಿದ್ದರೂ, ಕೆಲವೊಮ್ಮೆ ಇವು ಅಲೌಕಿಕ ಸತ್ಯವನ್ನು ಸೂಚಿಸುವ ಲಕ್ಷಣಗಳನ್ನು ಹೊಂದಿರುತ್ತವೆ. ಅವುಗಳನ್ನು ಗ್ರಹಿಸುವ ಮತ್ತು ಅವುಗಳಿಗೆ ಸಕರಾತ್ಮಕವಾಗಿ ಸ್ಪಂದಿಸುವ ಮನೋಧರ್ಮವನ್ನು ನಾವು ಬೆಳೆಸಿಕೊಂಡರೆ, ಅದು ನಮ್ಮ ಗ್ರಹಿಕೆಯ ಎಲ್ಲೆಯನ್ನು ವಿಸ್ತರಿಸಬಲ್ಲದು. ಅದರ ಪರಿಣಾಮವಾಗಿ ನಾವು ಬದುಕನ್ನು ವಿಭಿನ್ನವಾಗಿ ಕಾಣಬಲ್ಲೆವು; ಅಲ್ಲಿಯತನಕ ಕಾಣದ ಸತ್ಯಗಳನ್ನು ಕಾಣಬಲ್ಲೆವು. ಬದುಕಿನಲ್ಲಿ ಎದುರಾಗುವ ಲೆಕ್ಕವಿಲ್ಲದಷ್ಟು ಸನ್ನಿವೇಶಗಳಲ್ಲಿ ಯಾವುವು ಇಂಥ ಅನಂತದ 'ಸೂಚಕ'ಗಳು ಎಂಬುದನ್ನು ಪ್ರತಿಯೊಬ್ಬನೂ ಅವನವನ ತಿಳುವಳಿಕೆಗೆ ಅನುಗುಣವಾಗಿ ನಿರ್ಧರಿಸಬೇಕಷ್ಟೆ. ಆದರೆ ಅಂತಹ ಸನ್ನಿವೇಶಗಳಲ್ಲಿ ಗೋಚರವಾಗುವ ಕೆಲವು ಸಮಾನ ಅಂಶಗಳತ್ತ ನಾವು ಗಮನ ಹರಿಸಬಹುದು:

***ಮೃತ್ಯು:*** ಅನಾದಿಕಾಲದಿಂದಲೂ ಮನುಷ್ಯನಿಗೆ ಬಗೆಹರಿಸಲಾಗದ ಸಮಸ್ಯೆಯೇ ಸಾವು. ಎಲ್ಲ ಆಧ್ಯಾತ್ಮಿಕ ಅನ್ವೇಷಣೆಗಳೂ ಹುಟ್ಟು-ಸಾವು ಈ ದ್ವಂದ್ವದಿಂದಲೇ ಆರಂಭವಾದಂತೆ ಕಾಣುತ್ತದೆ. 'ಸತ್ತ ಮೇಲೆ ಏನು?' ಎಂಬ ಪ್ರಶ್ನೆಯಿಂದ ಆರಂಭವಾಗುವ ಕಠೋಪನಿಷತ್ತಿನ ಅನ್ವೇಷಣೆ, ನಚಿಕೇತನೆಂಬ ಹುಡುಗನ ಬ್ರಹ್ಮದರ್ಶನದಲ್ಲಿ ಕೊನೆಗಾಣುತ್ತದೆ. ಸಾವನ್ನು ಮೀರುವ, ಅಗೋಚರ ಭಯವನ್ನು ದಾಟುವ ಪ್ರವೃತ್ತಿ ಮನುಷ್ಯನನ್ನು ಕಲಕಿದಷ್ಟು ಬೇರಾವ ಅಂಶವೂ ಕಲಕಿರಲಾರದು. ಆದರೆ ಬುದ್ಧನ ಜೀವನದಲ್ಲಿ ಬರುವ 'ಕಿಸಾಗೌತಮಿಯ ಕಥೆ' ಅಥವಾ ಉಪನಿಷತ್ತು, ಗೀತೆಗಳಲ್ಲಿ ಬರುವ ಸಾವಿನ ಜಿಜ್ಞಾಸೆ ಮೃತ್ಯುವಿನ ಬಗ್ಗೆ ಸ್ಪಷ್ಟವಾದ ಮಾತುಗಳು , 'ಹುಟ್ಟಿದವನು ಸಾಯುವುದು ಅನಿವಾರ್ಯ' ಎಂದು ಹೇಳುತ್ತವೆ. ಆದರೆ ಹುಟ್ಟು, ಸಾವು ಎಂಬುದೇ ಅಂತಿಮ ಸತ್ಯವಲ್ಲ, ಶಾಶ್ವತವಾದ ಸತ್ಯವನ್ನು ಅರಿಯುವ ಮೂಲಕ, ಆಧ್ಯಾತ್ಮಿಕ ಸಾಧನೆಯ ಮೂಲಕ ಮನುಷ್ಯ ಸಾವನ್ನು ಮೀರಬಲ್ಲ ಎಂದು ವೇದಾಂತ ಹೇಳುತ್ತದೆ. ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವೂ ಬದಲಾಗುತ್ತದೆ, ಅದು ಪ್ರತಿಕ್ಷಣವೂ ಸತ್ತು ಹುಟ್ಟುತ್ತದೆ. ಪ್ರತಿಯೊಂದು ಜೀವಿಯ ಪಾಲಿಗೂ ಇದು ಸತ್ಯ, ಪ್ರತಿಯೊಂದು ಕಣಕಣವೂ ಈ ಪ್ರಕ್ರಿಯೆಗೆ ಹೊರತಲ್ಲ. ತತ್ತ್ವಶಾಸ್ತ್ರಗಳು ಪ್ರತಿಪಾದಿಸುವ ಈ ವಿಚಾರವನ್ನು ಆಧುನಿಕ ವಿಜ್ಞಾನವೂ ಸಮರ್ಥಿಸುತ್ತದೆ. ಈ ನಿರಂತರ ಬದಲಾವಣೆಯ ಹಿಂದಿರುವ ಶಾಶ್ವತ, ಸ್ಥಿರ ಹಾಗೂ ಅನಂತ ಅಸ್ತಿತ್ವವೇ ಸತ್, ಬದಲಾಗದ ಸತ್ಯ; ಅದನ್ನು ತಿಳಿದುಕೊಂಡು ಅದರಲ್ಲಿ ಒಂದಾಗುವುದೇ ಮೃತ್ಯುವಿನಿಂದ ಪಾರಾಗುವ ಮಾರ್ಗ ಎನ್ನುತ್ತದೆ ವೇದಾಂತ.

***ಕಾಲ:*** ಭೂತ-ವರ್ತಮಾನ-ಭವಿಷ್ಯತ್ ಎಂಬ ವಿಭಜನೆಯಿಂದ ನಾವು ಅರ್ಥಮಾಡಿಕೊಳ್ಳುವ ಕಾಲ ಮನುಷ್ಯನನ್ನು ಆಳವಾದ ಚಿಂತನೆಗೆ ಗುರಿಮಾಡಿದೆ. ಜಗತ್ತಿನ ಬದಲಾವಣೆಗಳ ಆಧಾರದಿಂದ ಗ್ರಹಿಸಲ್ಪಡುವ ಕಾಲವು ವೈಜ್ಞಾನಿಕವಾಗಿ 'ಎರಡು ಕ್ಷಣಗಳ ನಡುವಿನ ಅಂತರ' ಎಂದು ಕರೆಯಲ್ಪಟ್ಟರೂ, ತಾತ್ತ್ವಿಕವಾಗಿ ಅದು 'ದೇಶ'ಕ್ಕಿಂತ ಬೇರೆಯಿಲ್ಲ. ಎರಡು ಬಿಂದುಗಳ ನಡುವಿನ ಅಂತರವೇ ದೇಶ. ಇದು ಬದಲಾವಣೆಯ ಪ್ರಕ್ರಿಯೆಗೆ ಒಳಗಾದದ್ದರಿಂದಲೇ 'ಕಾಲ'ವೆಂಬ ಕಲ್ಪನೆ ಸಾಧ್ಯವಾಯಿತು. ಸ್ಮೃತಿ, ಹೋಲಿಕೆ, ಪರಿವರ್ತನೆ – ಇವುಗಳ ಕಾರಣದಿಂದ ಕಾಲದ ಅಸ್ತಿತ್ವ ನಮ್ಮ ಮನಸ್ಸಿನಲ್ಲಿ ಅದೊಂದು ಸತ್ಯವೆನ್ನುವ ಭಾವವನ್ನು ಮೂಡಿಸುವುದು. ಕಾಲವನ್ನು ಮೀರಿದ ಸಂಗತಿಗಳನ್ನು ಮನಸ್ಸು ಯೋಚಿಸವಾಗಲೆಲ್ಲ ಅದು ಅನಂತದ ಭಾವವನ್ನು ಮೂಡಿಸುತ್ತದೆ. ಉದಾಹರಣೆಗೆ, ಯಾವ ಬದಲಾವಣೆಯೂ ಇಲ್ಲದ, ಯಾವ ಕೊನೆಯೂ ಇಲ್ಲದ ಆಕಾಶ. ಅದನ್ನು ಕಲ್ಪಿಸಿಕೊಂಡಷ್ಟೂ ಮನಸ್ಸು ಕಾಲಾತೀತವಾಗುವುದು; ಅನಂತವನ್ನು ಗ್ರಹಿಸುವ ಯತ್ನ ಮಾಡುವುದು. ಅಸ್ತಿತ್ವ

ದಲ್ಲಿಲ್ಲದ ಭೂತ, ಭವಿಷ್ಯತ್ತುಗಳನ್ನು ಬಿಟ್ಟು ವರ್ತಮಾನವೊಂದನ್ನೇ ಚಿಂತಿಸತೊಡಗಿದರೆ ಅದೂ ಇಲ್ಲದಾಗುವುದು; ಕಾಲವೊಂದು ವಿಸ್ಮಯವೆನಿಸುವುದು. ಇದು ನಮ್ಮ ಐಹಿಕ ಅಸ್ತಿತ್ವವನ್ನೇ ಪ್ರಶ್ನಿಸುವಂತೆ ಮಾಡುವುದು. ಈ ಬಗೆಯ ಚಿಂತನೆ ನಮ್ಮನ್ನು ಶಾಶ್ವತವಾದ ಸತ್ಯದೆಡೆಗೆ ಒಯ್ಯುವುದು.

*ವಿನಾಶ:* ಎಲ್ಲವೂ ಸಹಜವಾಗಿದ್ದಾಗ, ಜೀವನದ ಕಾರ್ಯಕಲಾಪಗಳೆಲ್ಲ ಎಂದಿನಂತೆ ನಡೆಯುತ್ತಿದ್ದಾಗ ಇದ್ದಕ್ಕಿದ್ದಂತೆ ಆಘಾತಕಾರಿಯಾದ ಸುದ್ದಿ ಬಂದುಬಿಡುತ್ತದೆ. ಅಪಘಾತ, ಪ್ರಕೃತಿ ವಿಕೋಪ, ದುರ್ಘಟನೆ, ಅನಾಚಾರ, ಯುದ್ಧ, ಸಾವು – ಹೀಗೆ ಅನಿರೀಕ್ಷಿತಗಳಿಗೆ ಕೊನೆಯಿಲ್ಲ. ಮಾನವ ಸಹಜತೆಯನ್ನೇ ಬಯಸುತ್ತಾನೆ; 'ಎಲ್ಲವೂ ಚೆನ್ನಾಗಿದೆ' ಎಂಬ ಅವಸ್ಥೆಗಾಗಿಯೇ ಹೋರಾಡುತ್ತಾನೆ. ಆದರೆ ಎಲ್ಲವನ್ನೂ ಬುಡಮೇಲು ಮಾಡುವುದು ನಿಸರ್ಗದ ನಿಯಮ, ಪ್ರಕೃತಿಯ ಶಕ್ತಿ. ಇದನ್ನು ಅವನು ಸಹಿಸಲಾರ. ವಿನಾಶದ ಪರಿಣಾಮದಿಂದ ತತ್ತರಿಸುತ್ತ ಅವನು ಗೋಳಿಡುತ್ತಾನೆ. ತಡೆಯಲಾರದ ಸಂಕಟದಿಂದ ಚಿಂತಾಕ್ರಾಂತನಾಗುತ್ತಾನೆ. 'ಎಲ್ಲವೂ ಕಳಚಿಬಿದ್ದಂತಹ' ಭಾವನೆ ಅವನನ್ನು ಆವರಿಸುತ್ತದೆ. ಗ್ರೀಕ್ ದುರಂತ ನಾಟಕಗಳಲ್ಲಿ ಇದೇ ಭಾವವನ್ನು ಹಲವು ರೀತಿಯಲ್ಲಿ ಬಿಂಬಿಸಲಾಗಿದೆ. ಈ ಭಾವದ ನಡುವೆ ಕೆಲವರಿಗೆ ಜೀವನದ ನಶ್ವರತೆ ಗೋಚರವಾಗುವುದು. ವೈರಾಗ್ಯ, ಸತ್ಯಾನ್ವೇಷಣೆ, ತ್ಯಾಗ ಮನೋಭಾವ ಹುಟ್ಟಿಕೊಂಡು, ಅವರ ಜೀವನ ಹೊಸ ದಿಕ್ಕಿನಲ್ಲಿ ಸಾಗತೊಡಗುವುದು. ಹೀಗೆ ವಿನಾಶವೂ 'ಅನಂತ'ದ ಸೂಚಕವಾಗಿ ಕೆಲಸ ಮಾಡುವುದು.

*ಮುಪ್ಪು :* ಸಾಮಾನ್ಯವಾಗಿ ವೈರಾಗ್ಯ, ಆಧ್ಯಾತ್ಮ ಇವೆಲ್ಲ ಬರುವುದು ಅರವತ್ತು ವರ್ಷ ವಯಸ್ಸಿನ ನಂತರ ಎಂಬುದೊಂದು ಮಾತಿದೆ. ಇದಕ್ಕೂ ಕಾರಣವಿಲ್ಲದಿಲ್ಲ. ದೇಹ, ಮನಸ್ಸು, ಆರೋಗ್ಯದಿಂದ್ದಾಗ ಜೀವನ ಸಲೀಸಾಗಿ ನಡೆಯುತ್ತದೆ. ಹಲ್ಲು ಬಿದ್ದು, ಕೂದಲು ನರೆ ಬಂದು, ಚರ್ಮ ಸಡಿಲವಾದಾಗ, ಕಣ್ಣು ಮಂಜಾಗಿ ಏನೂ ಕಾಣಿಸದೆ ಹೋದಾಗ, ಎಲುಬುಗೂಡು ಕೆಲಸ ಮಾಡುವುದು ಕಷ್ಟವಾದಾಗ ಮನುಷ್ಯ ಚಿಂತೆ ಮಾಡತೊಡಗುತ್ತಾನೆ. ತನ್ನ ಜೀವನದ ಗತಕಾಲವೈಭವವನ್ನೆಲ್ಲ ಮೆಲುಕು ಹಾಕುತ್ತ, ಮುಂದೆ ಏನನ್ನೂ ಅನುಭವಿಸಲಾಗದ ಅಸಹಾಯಕತೆಗಾಗಿ ಗೊಣಗುತ್ತ ಅವನು ಕಾಲಯಾಪನೆ ಮಾಡುತ್ತಾನೆ. ಸಾವಿನ ನಿರೀಕ್ಷೆ ಮಾಡುತ್ತ ಅವನು ಬಾಳಿನ ಸಂಜೆಯ ದಿನಗಳನ್ನು ಕಳೆಯುತ್ತಿದ್ದಂತೆ, ಹಿಂದೆ ಎಲ್ಲೋ ಕೇಳಿದ ವೇದಾಂತ ವಿಚಾರಗಳು ನೆನಪಾಗುತ್ತವೆ. 'ಎಲ್ಲವೂ ಸುಳ್ಳು. ಶಾಶ್ವತವಾದದ್ದೆಂದರೆ ಭಗವಂತನೊಬ್ಬನೇ' ಎಂಬ ವಿಚಾರ ಸತ್ಯವಿರಬಹುದೇ ಎಂದು ಭಾವಿಸತೊಡಗುತ್ತಾನೆ. ಆದರೆ ಅನೇಕರು ಎಳೆಯ ವಯಸ್ಸಿನಿಂದಲೇ ಇಂಥ ವಿಚಾರಗಳಲ್ಲಿ ತೊಡಗಿ, ಮುಪ್ಪಿನ ತೊಂದರೆಗಳನ್ನು ಹಾಗೂ ಸಾವಿನ ಅನಿವಾರ್ಯ ದಿನವನ್ನು ಎದುರಿಸಲು ಸಿದ್ಧರಾಗುತ್ತಾರೆ. ಅವರಲ್ಲಿ ಈ ನಶ್ವರ ಬದುಕನ್ನು ಮೀರಿ, ಅನಂತ ಜೀವನವನ್ನು ತಬ್ಬುವ ಹಂಬಲ ಮೊಳೆತಿರುತ್ತದೆ.

ಪ್ರಪಂಚವನ್ನು, ಬದುಕನ್ನು ಹಾಗೂ ನಮ್ಮನ್ನು ತಿಳಿದುಕೊಳ್ಳುವ ರೀತಿಯಲ್ಲೇ ಒಂದು ಬಗೆಯ ತೊಡಕು ಇದೆ. ನಮ್ಮ ಜೀವನ, ನಮ್ಮ ಸುತ್ತಣ ಪ್ರಪಂಚ ಹಾಗೂ ನಮ್ಮ ಕಾಲಾವಧಿ – ಈ ಮಿತಿಯೊಳಗೇ ನಾವು ಚಿಂತಿಸುತ್ತೇವೆ, ಪ್ರತಿಯೊಂದನ್ನೂ ಗ್ರಹಿಸುತ್ತೇವೆ. ಐನೂರು, ಸಾವಿರ ವರ್ಷಗಳ ಹಿಂದೆ ಜನ ಹೇಗಿದ್ದರು, ಹೇಗೆ ಚಿಂತಿಸುತ್ತಿದ್ದರು, ಜಗತ್ತು ಹೇಗಿತ್ತು ಎಂದು ನಾವು ಸ್ಪಷ್ಟವಾಗಿ ಗ್ರಹಿಸಲಾರೆವು. ಇದೇ ರೀತಿ ಭವಿಷ್ಯವನ್ನು ಕೂಡ. ಕೆಲವೊಮ್ಮೆ ಸಹಸ್ರಾರು ವರ್ಷಗಳ ಹಿಂದಿನ ಸಂಗತಿಯನ್ನು ಕುರಿತು ಆಳವಾಗಿ ಚಿಂತಿಸುವಾಗ ಇದ್ದಕ್ಕಿದ್ದಂತೆ ನಮ್ಮ ಮನಸ್ಸು ಕಾಲ–ದೇಶಗಳ ಮಿತಿಯನ್ನು ಮೀರಿ ನಿಂತು, 'ಇದೆಲ್ಲ ಏನು?' ಎಂದು ಚಿಂತಿಸುತ್ತದೆ. ನಮ್ಮ ಸೀಮಿತ ಬದುಕು, ಸೀಮಿತ ದೃಷ್ಟಿ ಅರ್ಥವಿಲ್ಲದ ಒಂದು ಸಾಪೇಕ್ಷ ಸತ್ಯವಾಗಿ ಕಂಡುಬರುತ್ತದೆ. ಮತ್ತೆ ನಮ್ಮ ಸೀಮಿತ ದೃಷ್ಟಿಕೋನ ನಮ್ಮ ಮನಸ್ಸನ್ನು ಆವರಿಸುವ ಮುನ್ನ ಇಂಥ 'ಮಿತಿಯಾಚೆಗಿನ' ಇಣುಕುನೋಟವನ್ನೇ ಬಲವಾಗಿ ಹಿಡಿದು ಮುಂದುವರಿಯಬೇಕು. ಅದು ಅನಂತ ಜೀವನದ ಕೆಲವು ಒಳನೋಟಗಳನ್ನು ನೀಡುವುದು. ಆಗ ಜನನ–ಮರಣ, ಸುಖ–ದುಃಖ, ಏರುಪೇರುಗಳು, ಜೀವ–ಜೀವಗಳ ಒಡನಾಟ, ವಿಭಿನ್ನ ಅನುಭವಗಳ ಸರಪಳಿ ಇವೆಲ್ಲ ಒಂದು ನಿರಂತರ ಯಾನದಂತೆ ಕಂಡುಬರುವುದು. ನಮ್ಮ ಜೀವನವು ತೀರ ಕ್ಷಣಿಕವಾಗಿ, ಕ್ಷುಲ್ಲಕವಾಗಿ ಕಾಣಿಸುವುದು. ವಿಶಾಲ ಸಮುದ್ರದಲ್ಲಿ ಒಂದು ಹನಿ ನೀರು ಮೇಲೆದ್ದಂತೆ, ಮತ್ತೆ ಬಿದ್ದಂತೆ, ಅಲೆಗಳ ಮೇಲೆ ಮುಳುಗೇಳುತ್ತ ಸಾಗಿದಂತೆ, ಈ ಜೀವನ. ಇಂಥ ಭಾವನೆಗಳು ಕಣ್ಣಿಗೆ ಕಾಣುವ ಜಗತ್ತಿನ ಹಿಂದಿನ ಅನಂತ ಅಸ್ತಿತ್ವದೆಡೆಗೆ ನಮ್ಮನ್ನು ಕರೆದೊಯ್ಯುವುದು. ಎಲ್ಲ ದೃಶ್ಯಪ್ರಪಂಚದ ಹಿಂದೆ ನಿರಾಕಾರ ಬ್ರಹ್ಮನ ಅಸ್ತಿತ್ವವಿದೆ. ಎಲ್ಲ ಶಬ್ದಪ್ರಪಂಚದ ಹಿಂದೆ ಓಂಕಾರವಿದೆ, ಅದರ ಅಂತಿಮ ಪಾದದಲ್ಲಿ ಅಗಾಧ ಮೌನವಿದೆ. ಅದೇರೀತಿ ಎಲ್ಲ ಅನುಭವಗ್ರಾಹ್ಯ ಸಂಗತಿಗಳ ಹಿಂದೆ ಅಗ್ರಾಹ್ಯವಾದ ಚೈತನ್ಯವಸ್ತುವಿದೆ. ಇದು ಕೊನೆಯಿಲ್ಲದೆ ಸಾಗುವ ನಮ್ಮ ಪಯಣದ ಗುರಿ.

ತೈತ್ತಿರೀಯೋಪನಿಷತ್ತಿನಲ್ಲಿ ಬ್ರಹ್ಮನ ಲಕ್ಷಣವನ್ನು ಹೇಳುವಾಗ, **'ಸತ್ಯಂ ಜ್ಞಾನಮನಂತಂ ಬ್ರಹ್ಮ'** ಎನ್ನಲಾಗಿದೆ. ಇರುವಿಕೆ (ಸತ್), ಚೈತನ್ಯ(ಜ್ಞಾನ) ಹಾಗೂ ಅನಂತ – ಇವು ಬ್ರಹ್ಮನ ಲಕ್ಷಣಗಳು. ಯಾವುದೂ ಕೊನೆಗೊಳ್ಳುವವೋ, ಅವೆಲ್ಲ ಸೃಷ್ಟಿ–ಸ್ಥಿತಿ–ಲಯವೆಂಬ ಅವಸ್ಥೆಗಳಿಗೆ ಒಳಗಾಗುವುದರಿಂದ ಅವು ಆತ್ಯಂತಿಕ ಸತ್ಯವಲ್ಲ. ತ್ರಿಕಾಲಗಳಲ್ಲೂ ಅಬಾಧಿತವಾದ, ಅಳಿವಿಲ್ಲದ ಸತ್ಯ ಯಾವುದೋ ಅದೇ ಬ್ರಹ್ಮ; ಅದು ಅನಂತ. ದೈನಂದಿನ ಬದುಕಿನಲ್ಲಿ ನಾವು ಇದನ್ನು ಕಾಣಲಾರೆವು; ಏಕೆಂದರೆ ಪ್ರಪಂಚದ ಲಕ್ಷಣವೇ ಅದಕ್ಕೆ ವಿರುದ್ಧವಾದದ್ದು; ಸಾಂತ, ನಶ್ವರ ಹಾಗೂ ಬದಲಾಗುವ ಸ್ವಭಾವವುಳ್ಳದ್ದು. ಆದರೆ ಇವೆಲ್ಲದರ ನಡುವೆ 'ಅನಂತ'ದ ಸೂಚಕಗಳಿವೆ; ಶಾಶ್ವತದ, ನಿತ್ಯದ ಸೂಚನೆಗಳಿವೆ. ಅವುಗಳನ್ನು ಕಂಡುಕೊಳ್ಳುವುದೇ ಅನಂತವನ್ನು ತಲುಪುವ ಮೊದಲ ಹೆಜ್ಜೆಯಾಗಿದೆ. ✷

# ಓಂಕಾರ



✤ ಯಾರಿಗೆ ಭಗವಂತನ ಸಾಕ್ಷಾತ್ಕಾರ ದೊರೆತಿದೆಯೋ ಆತನಿಗೆ ಸಂಧ್ಯಾವಂದನಾದಿ ಕರ್ಮಗಳು ಇರುವುದಿಲ್ಲ. ಆತನ ವಿಷಯದಲ್ಲಿ ಸಂಧ್ಯಾವಂದನೆ ಗಾಯತ್ರಿಯಲ್ಲಿ ಲೀನವಾಗುತ್ತದೆ. ಅದು ಹಾಗಾದಾಗ ಗಾಯತ್ರಿಯನ್ನು ಜಪಿಸಿದರೇ ಬೇಕಾದಷ್ಟು. ಬಳಿಕ ಗಾಯತ್ರಿ ಓಂಕಾರದಲ್ಲಿ ಲಯವಾಗುತ್ತದೆ. ಅದಾದ ನಂತರ ಗಾಯತ್ರಿಯನ್ನು ಜಪಿಸಬೇಕಾದ ಆವಶ್ಯಕತೆಯೇನಿರುವುದಿಲ್ಲ; ಆಗ ಕೇವಲ ''ಓಂ'' ಎಂದು ಜಪಿಸುತ್ತಿದ್ದರೇ ಸಾಕು.

✤ ಶ್ರೀರಾಮಕೃಷ್ಣರು: ಓಂಕಾರ ಶಬ್ದವೇ ಬ್ರಹ್ಮ. ಋಷಿಗಳು ಮುನಿಗಳು ಈ ಶಬ್ದಬ್ರಹ್ಮದ ಸಾಕ್ಷಾತ್ಕಾರಕ್ಕಾಗಿ ತಪಸ್ಸು ಮಾಡುತ್ತಿದ್ದರು. ಸಿದ್ಧಿ ದೊರೆಯಿತು ಅಂದರೆ ಕೇಳಬಹುದು ಆ ಶಬ್ದ – ತಾನಾಗೇ ನಾಭಿಯಿಂದ ಮೇಲಕ್ಕೆ ಏಳುವುದನ್ನು.

✤ ಕೆಲವು ಮಂದಿ ಋಷಿಗಳು ಕೇಳುತ್ತಾರೆ: 'ಕೇವಲ ಈ ಶಬ್ದವನ್ನು ಕೇಳುವುದರಿಂದಲೇ ಏನು ದೊರೆಯುತ್ತದೆ?' ದೂರದಿಂದ ಸಮುದ್ರದ ಕಲ್ಲೋಲ ಶಬ್ದವನ್ನು ಕೇಳಬಹುದು. ಅದನ್ನು ಹಿಡಿದು ಮುಂದುವರಿದರೆ ಸಮುದ್ರವನ್ನು ಮುಟ್ಟಬಹುದು. ಎಲ್ಲಿಯವರೆಗೆ ಕಲ್ಲೋಲ ಎಂಬುದು ಇರುವುದೊ ಅಲ್ಲಿಯವರೆಗೆ ಸಮುದ್ರವೆಂಬುದೂ ಇರಲೇಬೇಕು. ಹಾಗೇ ಅನಾಹತಧ್ವನಿಯನ್ನು ಹಿಡಿದು ಮುಂದುವರಿದರೆ ಅದರ ಪ್ರತಿಪಾದ್ಯ ಬ್ರಹ್ಮನನ್ನು ಮುಟ್ಟಬಹುದು. ಅದಕ್ಕೇ ಪರಮಪದ ಅಂತ ಹೆಸರು. ಆದರೆ 'ಅಹಂ' ಎಂಬುದು ಇತ್ತು ಎಂದರೆ ಆ ವಿಧದ ಸಾಕ್ಷಾತ್ಕಾರ ಸಾಧ್ಯವಿಲ್ಲ. ಯಾವ ಅವಸ್ಥೆಯಲ್ಲಿ 'ನಾನು', 'ನೀನು' 'ಏಕ', 'ಅನೇಕ' ಯಾವುದೂ ಇರದೋ ಆ ಅವಸ್ಥೆಯಲ್ಲಿ ಬ್ರಹ್ಮದರ್ಶನ ದೊರೆಯುತ್ತದೆ.

✤ ಪ್ರಶ್ನೆ: ಮಹಾಶಯರೆ, ಅನಾಹತ ಶಬ್ದ ಎಂಬುದು ಏನು?

ಶ್ರೀರಾಮಕೃಷ್ಣರು: ಅನಾಹತ ಶಬ್ದ ತಾನಾಗೇ ಸರ್ವದಾ ಆಗುತ್ತಿರುತ್ತದೆ. ಅದು ಪ್ರಣವ ಧ್ವನಿ. ಪರಬ್ರಹ್ಮನಿಂದ ಬರುತ್ತಿದೆ, ಯೋಗಿಗಳು ಕೇಳಬಲ್ಲರು. ವಿಷಯಾಸಕ್ತ ಜೀವಕ್ಕೆ ಅದನ್ನು ಕೇಳಲು ಸಾಧ್ಯವಿಲ್ಲ. ಯೋಗಿಗೆ ಗೊತ್ತಾಗುತ್ತದೆ, ಅದು ತನ್ನ ನಾಭಿಯಿಂದಲೂ ಮತ್ತು ಕ್ಷೀರಸಾಗರಶಾಯಿಯಾದ ಪರಬ್ರಹ್ಮನಿಂದಲೂ ಹೊರಡುತ್ತಿದೆ ಎಂಬುದಾಗಿ.

✤ ನಾನು ಗಂಟೆಯ 'ಟಂ' ಶಬ್ದವನ್ನು ಉಪಮೆಯನ್ನಾಗಿ ಕೊಡುತ್ತೇನೆ. 'ಟ–ಅ–ಆ– ಮ––' ಅಂತ ಶಬ್ದ ಮಾಡುತ್ತದೆ. ಇದು ಲೀಲೆಯಿಂದ ನಿತ್ಯದಲ್ಲಿ ಲಯವಾಗುತ್ತದೆ. ಸ್ಥೂಲ, ಸೂಕ್ಷ್ಮ, ಕಾರಣಗಳಿಂದ ಮಹಾಕಾರಣದಲ್ಲಿ ಲಯವಾಗುವಿಕೆ. ಜಾಗ್ರತ್, ಸ್ವಪ್ನ, ಸುಷುಪ್ತಿಗಳಿಂದ ತುರೀಯದಲ್ಲಿ ಲಯವಾಗುವಿಕೆ. ಮತ್ತೆ ಗಂಟೆ ಶಬ್ದ ಆಯಿತು ಅಂದರೆ ಅದು ಮಹಾಸಮುದ್ರಕ್ಕೆ ಒಂದು ಭಾರವಾದ ವಸ್ತುವನ್ನು ಬಿಸಾಡಿದ ಹಾಗೆ. ಆಗ ಮತ್ತೆ ಅಲೆಗಳು ಆರಂಭವಾಗುತ್ತವೆ. ನಿತ್ಯದಿಂದ ಲೀಲೆಯ ಆರಂಭ, ಮಹಾಕಾರಣದಿಂದ ಸ್ಥೂಲ ಸೂಕ್ಷ್ಮ ಕಾರಣಶರೀರಗಳ ಆರಂಭ – ಆ ತುರೀಯದಿಂದಲೇ ಜಾಗ್ರತ್ ಸ್ವಪ್ನ ಸುಷುಪ್ತಿ ಮೊದಲಾದ ಅವಸ್ಥೆಗಳು ಆರಂಭವಾಗುತ್ತವೆ. ಮತ್ತೆ ಆ ಮಹಾಸಮುದ್ರದ ಅಲೆಗಳು ಆ ಮಹಾ ಸಮುದ್ರದಲ್ಲೇ ಲಯವಾಗುತ್ತವೆ, ನಿತ್ಯದಿಂದ ಲೀಲೆ, ಲೀಲೆಯಿಂದ ನಿತ್ಯ. ಅದಕ್ಕಾಗೇ ನಾನು 'ಟಂ' ಎಂಬ ಶಬ್ದವನ್ನು ಉಪಮೆಯಾಗಿ ಕೊಡೋದು. ನಾನು ಇವನ್ನೆಲ್ಲಾ ಸಾಕ್ಷಾತ್ತಾಗಿ ನೋಡಿದ್ದೇನೆ. ನನಗೆ ಭಗವತಿ ಚಿತ್‌ಸಮುದ್ರವನ್ನು ತೋರಿಸಿದ್ದಾಳೆ. ಅದಕ್ಕೆ ಮಿತಿ ಎಂಬುದೇ ಇಲ್ಲ. ಅದರಿಂದಲೇ ಈ ಇಡೀ ಲೀಲೆ ಆರಂಭವಾಯಿತು, ಮತ್ತೆ ಅದರಲ್ಲೇ ಅದು ಲಯವಾಗಿ ಹೋಯಿತು, ಕೋಟಿ ಕೋಟಿ ಬ್ರಹ್ಮಾಂಡಗಳು ಆ ಚಿದಾಕಾಶದಲ್ಲೇ ಉದ್ಭವವಾದವು, ಮತ್ತೆ ಅದರಲ್ಲೇ ಲಯವಾದುವು; ನಿಮ್ಮ ಶಾಸ್ತ್ರಗ್ರಂಥಗಳು ಏನು ಹೇಳುವವೊ ಅದು ನನಗೆ ಅಷ್ಟೊಂದಾಗಿ ಗೊತ್ತಿಲ್ಲ.

✤ ಓಂಕಾರವನ್ನು ಒಮ್ಮೆ ಪಠಿಸುವುದರಿಂದಲೇ ಸಮಾಧಿ ಉಂಟಾದರೆ ಆಗ ಅದು ಪೂರ್ಣ ಹಣ್ಣು.

✤ ಈ ಮಾಯಾಕಲ್ಪಿತ ಜೀವಜಗತ್ತನ್ನು ದಾಟಿದ ಒಡನೆಯೇ, ನಿತ್ಯನಾದವನ್ನು ಭೇದಿಸಿದೊಡನೆಯೇ ಸಮಾಧಿ. ಓಂಕಾರ ಸಾಧನೆ ಮಾಡುತ್ತ ನಾದ ಭೇದವಾಗಿಬಿಡುತ್ತದೆ; ಸಮಾಧಿ ಉಂಟಾಗುತ್ತದೆ.

✤ ಸಮಾಧಿಯಲ್ಲಿ ಏನು ಅನುಭವ ದೊರೆಯುವುದೊ ಅದನ್ನು ಬಾಯಿಂದ ಹೇಳಲಾಗೋದಿಲ್ಲ. ಇಳಿದುಬಂದು ಎಲ್ಲೋ ಒಂದು ಕಿಂಚಿತ್ತು ಅದರ ಆಭಾಸದ ಹಾಗಿರುವುದನ್ನು ಮಾತ್ರ ತಿಳಿಸಬಹುದು. ಸಮಾಧಿ ಇಳಿಮುಖವಾದ ನಂತರ ಯಾವಾಗ ನಾನು 'ಓಂ, ಓಂ', ಎಂದು ಹೇಳುವೆನೋ, ನಾನು ಆಗಲೇ ಒಂದು ನೂರು ಮೊಳ ಕೆಳಕ್ಕೆ ಇಳಿದುಬಿಟ್ಟಿರುತ್ತೇನೆ. ಬ್ರಹ್ಮನು ವೇದವಿಧಿಗಳಿಗೆ ಅತೀತನು, ಬಾಯಿಂದ ವರ್ಣಿಸಲಾಗೋದಿಲ್ಲ. ಅಲ್ಲಿ 'ನಾನು', 'ನೀನು' ಎಂಬ ಭಾವನೆ ಇಲ್ಲವೇ ಇಲ್ಲ.

ಶ್ರೀರಾಮಕೃಷ್ಣ ವಚನವೇದದಿಂದ



# ಜವಾಬ್ದಾರಿಯ ಪ್ರಜ್ಞೆ

ಕೆ.ವಿ.ಸ್ವರ್ಣಗೌರಿ

**ಜೀವನದ ವಿವಿಧ ಹಂತಗಳಲ್ಲಿ ಜವಾಬ್ದಾರಿಯ ಪ್ರಜ್ಞೆ ವಿಕಸನಗೊಂಡಾಗ ನಾವು ಬದುಕಿನಲ್ಲಿ ಅರ್ಥವನ್ನು ಕಂಡುಕೊಳ್ಳುತ್ತೇವೆ. ನಮ್ಮ ಬದುಕು ಸಾರ್ಥಕಗೊಳ್ಳಲು ಈ ಪ್ರಜ್ಞೆ ಅತ್ಯಗತ್ಯವೆಂಬ ಅಂಶವನ್ನು ವಿಶ್ಲೇಷಿಸಿರುವ ಲೇಖಕಿ ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.**

'ಇಂದಿನ ಮಗು ಮುಂದಿನ ಪ್ರಜೆ' – ಮಕ್ಕಳೇ ಆಸ್ತಿ. ಮಗು ಸತ್ಪ್ರಜೆಯಾಗದಿದ್ದರೆ ದೇಶಕ್ಕೆ ಹೊರೆಯಾಗುವುದು. ಕೇವಲ ದೈಹಿಕ ಬೆಳವಣಿಗೆಯೊಂದೇ ಪರಿಪೂರ್ಣವ್ಯಕ್ತಿಯನ್ನು ರೂಪಿಸದು. ಮಕ್ಕಳಲ್ಲಿ 'ಅಹಂ' ಪ್ರಜ್ಞೆಯು ಸುಪ್ತಾವಸ್ಥೆಯಲ್ಲಿರುವುದರಿಂದ ತಮ್ಮ ಜೀವನವನ್ನು ನಿರ್ವಹಿಸುವ ಪ್ರಜ್ಞೆ ಇರದು. ಆದರೆ ಮಗುವಿನ ದೈಹಿಕ ಬೆಳವಣಿಗೆಯೊಂದಿಗೆ 'ಅಹಂ' ಪ್ರತ್ಯಯವೂ ಮೂಡುತ್ತದೆ. ಇದರೊಂದಿಗೆ ಜವಾಬ್ದಾರಿ ಅಥವಾ ಹೊಣೆಗಾರಿಕೆಯ ಪ್ರಜ್ಞೆಯೂ ಮೂಡಬೇಕು. ಆಗಲೇ ಮಾನಸಿಕ, ನೈತಿಕ, ಆಧ್ಯಾತ್ಮಿಕ ಬೆಳವಣಿಗೆ ಸಾಧ್ಯವಾಗಿ ಒಬ್ಬ ಸುಸಂಪನ್ನ ವ್ಯಕ್ತಿಯ ನಿರ್ಮಾಣವಾಗುವುದು. ಮೊದಲು ಭೌತಿಕವಾಗಿ, ಮಾನಸಿಕವಾಗಿ ಪರಾವಲಂಬಿಯಾದ ಮಗು ಬೆಳೆದಂತೆ ಸಂಪೂರ್ಣ ಸ್ವತಂತ್ರವಾಗುತ್ತದೆ. 'ಸ್ವತಂತ್ರವೇ ಬೆಳವಣಿಗೆಯ ಏಕಮಾತ್ರ ನಿಯಮ' ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೨, ಪು.೫೫)*

ವ್ಯಕ್ತಿತ್ವವನ್ನು ರೂಪಿಸುವಲ್ಲಿ ಹೊಣೆಗಾರಿಕೆಯ ಪಾತ್ರ ಹಿರಿದು, ಮೌಲ್ಯವಿಲ್ಲದ ಪದಾರ್ಥಗಳನ್ನು ನಾವು ಇಟ್ಟುಕೊಳ್ಳುವುದಿಲ್ಲ, ಜವಾಬ್ದಾರಿಯ ಪ್ರಜ್ಞೆ ಮೂಡದಿದ್ದರೆ ನಮ್ಮ ಜೀವನಕ್ಕೂ ನಾವು ಮೌಲ್ಯವನ್ನು ನೀಡುವುದಿಲ್ಲ, ಮೌಲ್ಯವಿಲ್ಲದ ಜೀವನದಿಂದ ಏನನ್ನು ಸಾಧಿಸಬಹುದು? ''ನಾವೇ ಎಲ್ಲಕ್ಕೂ ಹೊಣೆಗಾರರಾದಾಗ ಮಾತ್ರ ನಮಗೆ ಅತಿ ಶ್ರೇಷ್ಠವಾದ ಕೆಲಸವನ್ನು ಮಾಡಲು ಸಾಧ್ಯವಾಗುತ್ತದೆ. ನಿಮ್ಮ ಕೈಗೆ ಒಂದು ಸಣ್ಣ ಮಗುವನ್ನು ಕೊಟ್ಟರೆ ನೀವು ಹೇಗೆ ವರ್ತಿಸುತ್ತೀರಿ? ತತ್ಕಾಲಕ್ಕೆ ನಿಮ್ಮ ಇಡೀ ಜೀವನ ಬದಲಾಯಿಸುವುದು. ನೀವು ಏನಾದರೂ ಆಗಿರಿ. ತಾತ್ಕಾಲಿಕವಾಗಿಯಾದರೂ ನೀವು ನಿಃಸ್ವಾರ್ಥಿಗಳಾಗಬೇಕು. ಜವಾಬ್ದಾರಿ ನಿಮ್ಮ ಮೇಲೆ ಬಿದ್ದರೆ ನಿಮ್ಮ ದುಷ್ಟ ಸ್ವಭಾವವನ್ನೆಲ್ಲಾ ಬಿಡುವಿರಿ. ನಿಮ್ಮ ಇಡೀ ಶೀಲ ಬದಲಾಯಿಸುವುದು'' ಎನ್ನುವ ಸ್ವಾಮಿ ವಿವೇಕಾನಂದರ ನುಡಿಗಳಲ್ಲಿ ನಾವು ಹೊಣೆಗಾರಿಕೆಯ ಹಿರಿಮೆಯನ್ನು ಕಾಣುತ್ತೇವೆ. *(ಕೃತಿಶ್ರೇಣಿ, ಸಂ.೭, ಪು.೧೩೨).* ಪರಿಪೂರ್ಣ ವ್ಯಕ್ತಿಯ ವಿಕಸನದಲ್ಲಿ ಮಹತ್ವದ ಪಾತ್ರ ವಹಿಸುವ ಈ ಜವಾಬ್ದಾರಿ ಪ್ರಜ್ಞೆಯ ಆರು ಮುಖಗಳನ್ನು ಅಧ್ಯಯನ ಮಾಡೋಣ:

### ವೈಯಕ್ತಿಕ ಜವಾಬ್ದಾರಿ

ಸಾಮಾನ್ಯವಾಗಿ ಜನರನ್ನು ಎರಡು ವಿಧವಾಗಿ ವರ್ಗೀಕರಿಸಬಹುದು. ತಮ್ಮ ಜೀವನದಲ್ಲಿ ನಡೆಯುವ ಎಲ್ಲಾ ಅಹಿತಕರ ಘಟನೆಗಳಿಗೆ ಇತರ ವ್ಯಕ್ತಿಗಳನ್ನೋ, ಪರಿಸ್ಥಿತಿಯನ್ನೊ ದೂರುವ ವರ್ಗದವರು ಒಂದು ವಿಧ. ಇವರನ್ನು 'Character disorders' ಎಂದು ಕರೆಯುತ್ತಾರೆ. ಇನ್ನೊಂದು ವರ್ಗದವರು ಎಲ್ಲಾ ತಪ್ಪುಗಳಿಗೂ ತಮ್ಮನ್ನೇ ಹಳಿದುಕೊಳ್ಳುತ್ತಾ ಕೊರಗಿ, ಕೊರಗಿ ಕುಗ್ಗುವರು. ಇವರೇ 'Neurosis.' ಆದರೆ ಈ ಜೀವನದಲ್ಲಿ ಯಾವುದಕ್ಕೆ ನಾವು ಹೊಣೆ, ಯಾವುದಕ್ಕೆ ಅಲ್ಲ ಎಂಬುದನ್ನು ತಿಳಿಯುವುದೇ ಮಾನವ ಅಸ್ತಿತ್ವದ ಅತಿ ಕ್ಲಿಷ್ಟಕರವಾದ ಸಮಸ್ಯೆ *(ನೋಡಿ: The Road Less Travelled, ಪು. ೩೭)* ವಾಸ್ತವಿಕವಾಗಿ ಎಲ್ಲಾ ಘಟನೆಗಳಿಗೂ ನಾವರ್ಧ ಕಾರಣರಾದರೆ, ಬಾಹ್ಯ ಪ್ರಪಂಚ ಅರ್ಧ ಕಾರಣ. ಆದ್ದರಿಂದಲೇ ಸ್ವಾಮಿ ವಿವೇಕಾನಂದರು, ''ನಿಮಗೆ ಬಿದ್ದ ಪ್ರತಿಯೊಂದು ಪೆಟ್ಟೂ, ನೀವೇ ಅದಕ್ಕೆ ಸಿದ್ಧರಾದುದರಿಂದ ಬಿತ್ತು. ನೀವು ಅರ್ಧ ಮಾಡಿದಿರಿ, ಬಾಹ್ಯ ಪ್ರಪಂಚ ಅರ್ಧ ಮಾಡಿತು. ಪೆಟ್ಟು ಬಂದದು ಹೀಗೆ'' ಎನ್ನುತ್ತಾರೆ. *(ಕೃತಿಶ್ರೇಣಿ, ಸಂ.೬, ಪು.೨೫೮)*

ನಾವೇ ಎಲ್ಲಕ್ಕೂ ಎಂದು ಹೊಣೆಗಾರರಾಗುವೆವೋ ಆಗಲೇ ನಮ್ಮ ಅತಿಶ್ರೇಷ್ಠ ಶೀಲ ವ್ಯಕ್ತವಾಗುವುದು. ಇತಿಹಾಸದ ಪುಟಗಳನ್ನು ತಿರುವಿ ಹಾಕಿದಾಗ ಈ ಸತ್ಯವು ನಮಗೆ ಗೋಚರವಾಗದಿರದು.

ಶ್ರೇಷ್ಠ ಶೀಲ ವ್ಯಕ್ತವಾಗುವ ಪರಿಯನ್ನು ಸ್ವಾಮೀಜಿ ತಿಳಿಸಿಕೊಡುತ್ತಾರೆ: ''ನಾವು ಮತ್ತಾರನ್ನೂ ಸೆಳೆಯದೆ ಇರುವಾಗ, ದೂರುವುದಕ್ಕೆ ಯಾವ ದೆವ್ವವೂ ಇಲ್ಲದೆ ಇರುವಾಗ, ನಮ್ಮ ಹೊರೆಯನ್ನು ಹೊರುವುದಕ್ಕೆ ಯಾವ ಸಾಕಾರ ದೇವರೂ ಇಲ್ಲದೆ ಇರುವಾಗ, ನಾವೇ ಎಲ್ಲಕ್ಕೂ ಹೊಣೆಗಾರರಾದಾಗ, ನಾವು ನಮ್ಮ ಶೀಲದ ಭವ್ಯ ಶಿಖರಕ್ಕೆ ಏರುವೆವು. ನನ್ನ ಅದೃಷ್ಟಕ್ಕೆ ನಾನೇ ಹೊಣೆ. ನಾನೇ ನನ್ನ ಒಳ್ಳೆಯದಕ್ಕೆ ಕಾರಣ, ನಾನೇ ನನ್ನ ಕೆಟ್ಟದಕ್ಕೆ ಕಾರಣ.'' *(ಕೃತಿಶ್ರೇಣಿ, ಸಂ.೨, ಪು.೧೩೨)*

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ॥** *(ಗೀತೆ, ೬.೫)*

'ತನ್ನನ್ನು ತಾನೇ ಮೇಲೆತ್ತಿಕೊಳ್ಳಬೇಕು, ತನ್ನನ್ನು ಕುಗ್ಗಿಸಿಕೊಳ್ಳಬಾರದು; ಏಕೆಂದರೆ ತಾನೇ ತನಗೆ ಬಂಧು ಮತ್ತು ತಾನೇ ತನ್ನ ಶತ್ರು' ಎನ್ನುವಲ್ಲಿ ಶ್ರೀಕೃಷ್ಣನೂ ಇದೇ ಸಂದೇಶವನ್ನು ನೀಡುತ್ತಾನೆ. ಎಲ್ಲಾ ಆಚಾರ್ಯರ, ಜಗದ್ಗುರುಗಳ, ಅವತಾರ ಪುರುಷರ, ಶಾಸ್ತ್ರ ಗ್ರಂಥಗಳ ಸಂದೇಶವೂ ಇದೇ. ಪ್ರಗತಿಗೆ ಇದೊಂದೇ ದಾರಿ.

ಇನ್ನು ಕೆಲವರು ಕರ್ತವ್ಯದ ಹೆಸರಿನಲ್ಲಿ ತಮ್ಮನ್ನೇ ಕಡೆಗಣಿಸುತ್ತಾರೆ. ''ಕರ್ತವ್ಯವೆಂಬುದು ಬೇಸಿಗೆಯ ನಡುಹಗಲಿನ ಸೂರ್ಯನಂತೆ ನಮ್ಮನ್ನು ದಹಿಸುವುದು'' ಎಂದು ಎಚ್ಚರಿಸುತ್ತಾರೆ ಸ್ವಾಮೀಜಿ. *(ಕೃತಿಶ್ರೇಣಿ, ಸಂ.೩, ಪು.೧೧೩)*. ನನ್ನ ಆರೋಗ್ಯ, ನೆಮ್ಮದಿ, ಶಾಂತಿ, ಸಂತೋಷಗಳನ್ನು ಕಾಪಾಡಿಕೊಳ್ಳುವುದು ಸಹ ವೈಯಕ್ತಿಕ ಜವಾಬ್ದಾರಿಯ ಒಂದು ಅಂಶ.

ಸುಪ್ರಸಿದ್ಧ ಹೃದಯತಜ್ಞ ವೈದ್ಯ ಸುಧೀರನು ಸದಾ ಕಾರ್ಯನಿರತ. ಇತರರ ಕರೆಗೆ ಓಗೊಡುವುದರಲ್ಲೇ ದಿನವೆಲ್ಲಾ ಕಳೆದು ಮನೆಗೆ ಹಿಂತಿರುಗುವ ವೇಳೆಗೆ ಸಂಪೂರ್ಣ ದಣಿದಿರುತ್ತಿದ್ದನು. ಬರಬರುತ್ತಾ ಜೀವನ ನಿಸ್ಸಾರವೆನಿಸಿ ಮನೋವೈದ್ಯರನ್ನು ಭೇಟಿ ಮಾಡಿದನು. ಅವರು ಒಂದು ಪ್ರಶ್ನೆ ಕೇಳಿದರು, ''ರೋಗಿಯೊಬ್ಬ ಶಸ್ತ್ರಚಿಕಿತ್ಸೆಗಾಗಿ ನಿಮ್ಮ ಬಳಿ ಬರುವನು. ಅವನಿಗೆ ಶಸ್ತ್ರಚಿಕಿತ್ಸೆ ಮಾಡಿದರೆ ನೀವು ಬದುಕುವುದಿಲ್ಲ, ಮಾಡದಿದ್ದರೆ ಆತ ಉಳಿಯೊಲ್ಲ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನಿಮ್ಮ ನಿರ್ಧಾರವೇನು?'' ಬಹಳ ಹೊತ್ತು ಯೋಚಿಸಿದ ಸುಧೀರನು, ''ನಾನು ಬದುಕುವುದೇ ಉತ್ತಮ. ಇತರರನ್ನು ಉಳಿಸಲು ನನ್ನನ್ನೇ ಬಲಿಕೊಡುವುದರಲ್ಲಿ ಅರ್ಥವಿಲ್ಲ'' ಎಂದು ಉತ್ತರಿಸಿದನು. ಇದು ಆತನ ಜೀವನಕ್ಕೆ ಒಂದು ಹೊಸ ತಿರುವು ನೀಡಿತು. ಇತರರಿಗೆ ಆನಂದ, ದಯೆ, ಸ್ವಾಂತನ, ಸ್ವಾತಂತ್ರ್ಯ ತರುವುದರ ಜೊತೆಗೆ ಅವುಗಳನ್ನು ತಾನೂ ಸ್ವತಃ ಅನುಭವಿಸುವುದೇ ಸಂತೋಷದ ಗುಟ್ಟು ಎಂಬ ಸತ್ಯವನ್ನರಿತನು ವೈದ್ಯ ಸುಧೀರ. *(ನೋಡಿ: '**Living Greatness**' by Joseph Law – p.24)*

ವೇದಾಂತದ 'ದಶಮಸ್ತ್ವಮಸಿ'(ಹತ್ತನೆಯವ ನೀನು) ಎಂಬ ಕಥೆಯ ಸಂದೇಶವೂ ಇದೇ. ಒಮ್ಮೆ ಹತ್ತು ಜನ ಬುದ್ಧಿವಂತರು ಯಾವುದೋ ಕಾರ್ಯನಿಮಿತ್ತವಾಗಿ ಒಂದು ಪ್ರದೇಶಕ್ಕೆ ಹೋಗುತ್ತಿದ್ದರು. ದಾರಿಯಲ್ಲಿ ಒಂದು ನದಿ ದಾಟಬೇಕಾಗಿ ಬಂತು. ಎಲ್ಲರೂ ಸುರಕ್ಷಿತವಾಗಿ ತಲುಪಿರುವೆವೆ ಎಂಬುದನ್ನು ಪರಾಮರ್ಶಿಸಲು ಯೋಚಿಸಿ, ಒಬ್ಬಾತನು ಗಣನೆ ಮಾಡಲು ಪ್ರಾರಂಭಿಸಿದ. ತನ್ನನ್ನೇ ಲೆಕ್ಕ ಹಾಕಲು ಮರೆತ ಭೂಪ, ತಾವು ಒಂಬತ್ತು ಜನರಿದ್ದೇವೆ, ಒಬ್ಬ ನೀರಿನಲ್ಲಿ ಮುಳುಗಿಹೋಗಿರುವನೆಂದು ಅಳಲು ಪ್ರಾರಂಭಿಸಿದ. ಇನ್ನೊಬ್ಬ ಎಣಿಸುವೆನೆಂದು ಮುಂದೆ ಬಂದ. ಆತನು ತನ್ನನ್ನೇ ಮರೆತ! ಹೀಗೆ ಎಲ್ಲರೂ ಒಬ್ಬೊಬ್ಬರಾಗಿ ಗಣನೆ ಮಾಡತೊಡಗಿದರು. ಏನೇ ಮಾಡಿದರೂ ಒಂಬತ್ತೇ ಜನ! ಎಲ್ಲರೂ ಹೀಗೆ ಗಟ್ಟಿಯಾಗಿ ರೋದಿಸುತ್ತಿರುವುದನ್ನು ಕೇಳಿದ ದಾರಿಹೋಕನೊಬ್ಬ ಕಾರಣ ವಿಚಾರಿಸಲು, ನಡೆದ ಸಂಗತಿ ತಿಳಿಯಿತು. ಆತ ಕೂಡಲೇ ಎಲ್ಲರನ್ನೂ ಸಾಲಾಗಿ ನಿಲ್ಲಿಸಿ ಗಣನೆ ಮಾಡಿದ. ಆಗ ಹತ್ತು ಜನರೂ ಇರುವುದನ್ನು ಅವರೆಲ್ಲ ಅರಿತರು. ಎಲ್ಲರೂ ಸಂತೋಷದಿಂದ ಕುಣಿದಾಡಿದರು!

ಆದ್ದರಿಂದ ನಮ್ಮ ದೈಹಿಕ, ಮಾನಸಿಕ, ಆಧ್ಯಾತ್ಮಿಕ ಆರೋಗ್ಯವನ್ನು ಕಾಪಾಡಿಕೊಳ್ಳುವುದೂ ಸಹ ನಮ್ಮ ವೈಯಕ್ತಿಕ ಜವಾಬ್ದಾರಿ ಹಾಗೂ ಕರ್ತವ್ಯ ಎಂಬುದನ್ನು ಮರೆಯಬಾರದು.

### ಸಾಮಾಜಿಕ ಜವಾಬ್ದಾರಿ

ಸಮಾಜವೆಂದರೆ ವ್ಯಕ್ತಿಗಳ ಸಮೂಹ. ಶೀಲವಂತ ವ್ಯಕ್ತಿಗಳೇ ಆರೋಗ್ಯಕರ ಸಮಾಜದ ಭದ್ರ ಬುನಾದಿ, ಯಾವುದೇ ಕೆಲಸವೂ ವೈಯಕ್ತಿಕವಾದುದಲ್ಲ, ಎಲ್ಲಕ್ಕೂ ಒಂದು ಸಾಮಾಜಿಕ ಆಯಾಮವಿರುತ್ತದೆ ಎಂಬ ಅರಿವೇ ನಮ್ಮಲ್ಲಿ ಸಾಮಾಜಿಕ ಜವಾಬ್ದಾರಿಯನ್ನು ಜಾಗೃತಗೊಳಿಸುತ್ತದೆ. ಒಬ್ಬಾತನು ತನ್ನ ಜೀವನ ನಿರ್ವಹಿಸಲು ಕಳ್ಳತನ ಮಾಡುತ್ತಿರಬಹುದು. ಆದರೆ ಇದರಿಂದ ಸಮಾಜದ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತದೆ. ಮತ್ತೊಬ್ಬ ತನ್ನ ಹೊಟ್ಟೆಪಾಡಿಗಾಗಿ ಪ್ರಾಮಾಣಿಕವಾಗಿ, ನಿಷ್ಠೆಯಿಂದ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದರೆ ಅದು ಸಮಾಜದ ಸಂಸ್ಕೃತಿಯನ್ನು ರೂಪಿಸುತ್ತದೆ. ಹೀಗೆ ನಮ್ಮ ಪ್ರತಿಯೊಂದು ಕೆಲಸವೂ ವೈಯಕ್ತಿಕ ಎನಿಸಿದರೂ ಅದಕ್ಕೆ ಸಾಮಾಜಿಕ ಆಯಾಮವಿದ್ದೇ ಇರುತ್ತದೆ. ತನ್ನ ಸಾಮರ್ಥ್ಯವನ್ನೂ ಪ್ರತಿಭೆಯನ್ನೂ ಒಳ್ಳೆಯ ಅಥವಾ ಕೆಟ್ಟ ಸ್ವಭಾವವನ್ನೂ ಹೊರಗೆ ವ್ಯಕ್ತ ಪಡಿಸುವುದರ ಮೂಲಕ ಅವನು ಸಮಾಜದ ಸಂಸ್ಕೃತಿಯನ್ನು ರೂಪಿಸುತ್ತಾನೆ. ವ್ಯಕ್ತಿ ಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆ ಒಂದೇ ನಾಣ್ಯದ ಎರಡು ಮುಖಗಳಂತೆ. ವ್ಯಕ್ತಿಯ ಸುಖ ಆರೋಗ್ಯಕರ ಸಮಾಜವನ್ನು ಅವಲಂಬಿಸಿರುತ್ತದೆ ಮತ್ತು ಆರೋಗ್ಯಕರ ಸಮಾಜವು ವ್ಯಕ್ತಿಯ ಶೀಲವನ್ನು ರೂಪಿಸುತ್ತದೆ. ಎರಡೂ ಒಂದಕ್ಕೊಂದು ಪೂರಕ.

ಒಮ್ಮೆ ತಮಿಳುನಾಡಿನ ಅಂಬಾಸಮುದ್ರ ಸಮೀಪದ ಆಳ್ವಾರ್ ಕುರುಚ್ಚಿ ದೇವಸ್ಥಾನದ ಗೋಪುರದೆದುರು ಯಾವುದೋ ತಮಿಳು ಚಲನಚಿತ್ರದ ಶೂಟಿಂಗ್ ಪ್ರಾರಂಭವಾಯಿತು. ನಾಯಕ ನಾಯಕಿ

ಅಶ್ಲೀಲ ವೇಷ ತೊಟ್ಟು ಹಾಡಿ ಕುಣಿಯಲಾರಂಬಿಸಿದ್ದನ್ನು ನೋಡು ತ್ತಿದ್ದ ಹಳ್ಳಿಗರ ಸಂಯಮದ ಕಟ್ಟೆಯೊಡೆದು, ಕೂಡಲೇ ಸಿನಿಮಾ ತಂಡವನ್ನು ಘೆರಾವ್ ಮಾಡಿದರು. 'ದೇವಾಲಯದ ಪಾವಿತ್ರ್ಯ ರಕ್ಷಿಸಿ' ಎಂದು ಕೂಗುತ್ತಾ ಫಿಲ್ಮ್ ರೋಲ್ ಕೊಡಿ ಎಂದು ಉಗ್ರ ಪ್ರತಿ ಭಟನೆ ಮಾಡಿದರು. ಕೊನೆಗೆ ನಿರ್ದೇಶಕ ಈ ದೃಶ್ಯವನ್ನು ಚಿತ್ರದಿಂದ ತೆಗೆದುಹಾಕುತ್ತೇವೆ ಎಂದು ಸಹಿ ಹಾಕಿದ ಮೇಲೆ ಜನ ಶಾಂತ ರಾದರು. ಚಿತ್ರತಂಡ ಕಾಲ್ತೆಗೆದ ಮೇಲೆ ಜನ ಭಜನೆ, ಕೀರ್ತನೆ ಹಾಡುತ್ತಾ ಕುಣಿಯತೊಡಗಿದರು. *(ನೋಡಿ - ಪ್ರತಿಭಾ ವಿಕಾಸ್ ಪ್ರತಿಷ್ಠಾನದ ಪುಸ್ತಿಕೆ, 'ಕೈ ತುತ್ತು', ಪು.೭೮).* ಸಮಾಜದ ವಾತಾ ವರಣ ಕಾಪಾಡುವ ಜವಾಬ್ದಾರಿ ಪ್ರತಿಯೊಬ್ಬರ ಹೆಗಲ ಮೇಲೂ ಇದೆ. ಏಕೆಂದರೆ ಕಲುಷಿತ ವಾತಾವರಣದಲ್ಲಿ ಬದುಕುವುದು ನಾವೇ ತಾನೆ? ಉದಾಹರಣೆಗೆ, ಸಮಾಜದಲ್ಲಿ ಎಲ್ಲರೂ ಸುಳ್ಳು ಹೇಳುವು ದನ್ನು ಅಭ್ಯಸಿಸಿದರೆ, ಆಗ ಯಾರು ಯಾರ ಮಾತನ್ನು ನಂಬಲು ಸಾಧ್ಯ? ಹಾಗೇ ಎಲ್ಲರೂ ಕಳ್ಳತನ ಮಾಡಲು ತೊಡಗಿದರೆ ಎಂತಹ ಭಯಾನಕ ವಾತಾವರಣ ಸೃಷ್ಟಿಯಾಗುತ್ತದೆ! ಇಂತಹ ಪರಿಸ್ಥಿತಿ ಯಲ್ಲಿ ಸುಖ, ಶಾಂತಿ, ನೆಮ್ಮದಿಗಳು ಕೇವಲ ನಿಘಂಟಿನಲ್ಲಿ ಮಾತ್ರ ಉಳಿಯುತ್ತದೆ. ಹೀಗೆ ಲಂಚ, ಮೋಸ, ಸುಲಿಗೆ, ಕುಡಿತ ಮುಂತಾದ ಅನೈತಿಕ ಗುಣಗಳು ಸಮಾಜವನ್ನು ವಿಷಪೂರಿತಗೊಳಿಸುತ್ತದೆ.

ಸಾಮಾಜಿಕ ಜವಾಬ್ದಾರಿಯ ಮತ್ತೊಂದು ಆಯಾಮವನ್ನು ನಾವು ಗಮನಿಸಬೇಕು. ನಮ್ಮ ಸುಖ ಜೀವನಕ್ಕೆ ಬೇಕಾದ ಮೂಲ ಭೂತ ವಸ್ತುಗಳೂ, ಇತರ ಸಲಕರಣೆಗಳೆಲ್ಲವೂ ಅನೇಕ ಜನರ ಪರಿ ಶ್ರಮ, ದುಡಿತದಿಂದ ದೊರೆತದ್ದು. ಸಮಾಜದಿಂದ ಒಳ್ಳೆಯದೆಲ್ಲ ವನ್ನೂ ಸ್ವೀಕರಿಸಿ, ಅದಕ್ಕೆ ಪ್ರತಿಯಾಗಿ ಏನನ್ನೂ ನೀಡದವರನ್ನು ಗೀತಾಚಾರ್ಯ ಕೃಷ್ಣ, **'ಯೋ ಭುಂಕ್ತೇ ಸ್ತೇನ ಏವ ಸಃ'** *(೩.೧೨)* ಎಂದಿದ್ದಾರೆ. ಅಂದರೆ, ಯಾರು ಏನನ್ನೂ ಅರ್ಪಿಸದೆ ಅನುಭವಿಸು ತ್ತಾನೆಯೋ ಅವನು ಕಳ್ಳನೇ ಸರಿ ಎಂದರ್ಥ. ಆತನನ್ನು ಸ್ವಾರ್ಥಿ, ಕಪಟಿ ಎನ್ನುತ್ತೇವೆ. ಈ ಸಂದರ್ಭದಲ್ಲಿ ಪ್ರಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನ್‌ನ ಮಾತುಗಳು ನಿಜಕ್ಕೂ ಸ್ಮರಣೀಯವಾದದ್ದು: ''ನನ್ನ ಆಂತರಿಕ ಮತ್ತು ಬಾಹ್ಯ ಜೀವನ ಇತರರ ಶ್ರಮದ ಫಲದ ಮೇಲೆ ಯೇ ಅವಲಂಬಿತವಾಗಿದೆ. ಅವರೆಲ್ಲ ಇನ್ನೂ ಬದುಕಿರಬಹುದು ಅಥವಾ ಇಲ್ಲದೇ ಇರಬಹುದು. ನಾನು ಪಡೆದಿರುವ, ಈಗಲೂ ಪಡೆಯುತ್ತಿರುವ ಸಹಾಯಕ್ಕೆ ಪ್ರತಿಯಾಗಿ ಏನನ್ನಾದರೂ ನೀಡಲು ಸದಾ ನಾನು ಪ್ರಯತ್ನಿಸುತ್ತಿರುತ್ತೇನೆ. ದಿನದಲ್ಲಿ ನೂರು ಸಲ ನನಗೆ ನಾನೇ ಇದನ್ನು ಹೇಳಿಕೊಳ್ಳುತ್ತೇನೆ. ಪ್ರತಿಯೊಬ್ಬರೂ ಈ ನುಡಿ ಗಳನ್ನು ಪ್ರಾಮಾಣಿಕವಾಗಿ ಪಾಲಿಸಲು ಯತ್ನಿಸಿದರೆ ಎಂತಹ ಸಮಾ ಜದ ನಿರ್ಮಾಣವಾಗಬಹುದು ಎಂದು ಊಹಿಸಿಕೊಂಡು, ಮನಸ್ಸು ನಿರಾತಂಕ ಹೊಂದಿ ಶಾಂತಿ, ನೆಮ್ಮದಿಗಳ ಬೀಡಾಗುವುದು.''

ನ್ಯೂಯಾರ್ಕ್‌ನಲ್ಲಿ ಟ್ಯಾಕ್ಸಿ ಚಾಲಕರಾದ ದತ್ತಶರ್ಮ ಅವರ ಪತ್ನಿ ಓರ್ವ ನರ್ಸ್. ಅಮೆರಿಕಾದಂಥ ದುಬಾರಿ ದೇಶದಲ್ಲಿ ಈ ದಂಪತಿಗಳು ಕಟ್ಟಿನಿಟ್ಟಾದ, ಮಿತವ್ಯಯದ ಸರಳ ಬದುಕು ನಡೆ ಸುತ್ತಾ ಭಾರತದಲ್ಲಿನ ತಮ್ಮ ಗ್ರಾಮದ ಶಾಲೆಯ ಪೋಷಣೆಗೆ ಪ್ರತಿ ವರ್ಷ ತಮ್ಮಿಬ್ಬರ ಉಳಿತಾಯದ ೨೫೦೦ ಡಾಲರ್‌ಗಳನ್ನು ಕಳು ಹಿಸುತ್ತಾರೆ. *('ಕೈತುತ್ತು', ಪು. ೬೬)*

ಶಿಕ್ಷಕರ ದಿನಾಚರಣೆಯಲ್ಲಿ ಉತ್ತಮ ಶಿಕ್ಷಕರೆಂದು ಸನ್ಮಾನಿಸಲ್ಪಟ್ಟ ಅಧ್ಯಾಪಕ ಚಕ್ರವರ್ತಿ ಶ್ರೀಧರ್‌ರವರು ಅವಿವಾಹಿತರಾಗಿ ಉಳಿದು ಕೊಂಡು, ತಮಗೆ ಬರುವ ವೇತನದಲ್ಲಿ ತಮ್ಮ ಸ್ವಂತದ ಖರ್ಚು ವೆಚ್ಚಕ್ಕಾಗಿ ಕನಿಷ್ಠತಮ ಹಣವನ್ನು ಇರಿಸಿಕೊಂಡು ಮಿಕ್ಕ ಹಣವನ್ನು ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳ ಪಠ್ಯಪುಸ್ತಕ, ಶುಲ್ಕ, ಬಟ್ಟೆಬರೆ, ಹಾಸ್ಟೆಲ್ ವೆಚ್ಚಕ್ಕೆ ನೀಡುವರು. ನಿವೃತ್ತಿಯ ಅಂಚಿನಲ್ಲಿರುವಾಗ ತಮಗೆ ಬರುತ್ತಿದ್ದ ರೂ.೧೮,೦೦೦/- ವೇತನದಲ್ಲಿ ತಮಗಾಗಿ ರೂ. ೧೫೦೦/- ಹಾಗೂ ವಿದ್ಯಾರ್ಥಿಗಳಿಗಾಗಿ ರೂ. ೧೬,೫೦೦/- ಖರ್ಚು ಮಾಡುತ್ತಿದ್ದರು. ನಿವೃತ್ತರಾದಾಗ ಕೈಗೆ ಬಂದ ಹಣವನ್ನೂ ಉನ್ನತ ವ್ಯಾಸಂಗದಲ್ಲಿ ತೊಡಗಿರುವ ೪೪ ವಿದ್ಯಾರ್ಥಿಗಳಿಗೆ ಹಂಚಿ ಬಿಟ್ಟರು! *('ಕೈತುತ್ತು', ಪು. ೬೪)*

ವ್ಯಕ್ತಿ ತನ್ನ ಪ್ರಕೃತಿಯಿಂದ ಮೇಲೆದ್ದು, ಇಡೀ ಸಮಾಜವನ್ನು ಕುರಿತು ಯೋಚಿಸುವ, ಸಮಜದ ಸುಖ-ದುಃಖಗಳ ಸಂವೇದನೆ ಗಳಲ್ಲಿ ಒಂದಾಗುವ ಪ್ರೇರಣೆಯನ್ನು ಸಂಸ್ಕೃತಿ ನಮಗೆ ನೀಡುತ್ತದೆ. ಅಮೆರಿಕ ಅಧ್ಯಕ್ಷರಾಗಿದ್ದ ಜಾನ್. ಎಫ್. ಕೆನಡಿಯವರು, ''ನಿನ್ನ ರಾಷ್ಟ್ರ ನಿನಗೇನು ನೀಡುತ್ತದೆ ಎಂದು ಚಿಂತಿಸಬೇಡ. ನೀನು ನಿನ್ನ ದೇಶಕ್ಕೆ ಕೊಡುವ ಕೊಡುಗೆ ಏನು ಎನ್ನುವುದರ ಬಗ್ಗೆ ಚಿಂತಿಸು'' ಎಂದು ನಮ್ಮೆಲ್ಲರ ಹೆಗಲ ಮೇಲಿರುವ ಗುರುತರ ಜವಾಬ್ದಾರಿ ಯನ್ನು ಕುರಿತು ಎಚ್ಚರಿಸುತ್ತಿದ್ದಾರೆ.

ಯಾರೊಬ್ಬರೂ ಏಕಾಂಗಿಯಾಗಿ ಬದುಕಲಾರೆವು. ಆದ್ದರಿಂದ ಸಮಾಜದೊಡನೆ ಪ್ರೀತಿಪೂರ್ವಕ ಸಂಬಂಧ ಬೆಳೆಸಿಕೊಳ್ಳುವುದು ಸಹ ಪ್ರತಿಯೊಬ್ಬ ವ್ಯಕ್ತಿಯ ಸಾಮಾಜಿಕ ಜವಾಬ್ದಾರಿ.

### ನೈತಿಕ ಜವಾಬ್ದಾರಿ

ವ್ಯಕ್ತಿ ತಾನು ಸ್ವತಂತ್ರನಾಗಬೇಕು ಎಂಬ ಆಂತರಿಕ ತುಡಿತವೇ ನೈತಿಕತೆ ತಳಹದಿ ಎನ್ನುತ್ತಾರೆ ಸ್ವಾಮಿ ವಿವೇಕಾನಂದರು. ಅಂತಃ ಪ್ರೇರಣೆಯಿಂದ ಮೂಡಿ ಬರುವ ನೈತಿಕತೆ ಸ್ವಾಭಾವಿಕವಾದದು. ಈ ದೃಷ್ಟಿಯಿಂದ ನೋಡಿದಾಗ ಒಳ್ಳೆಯತನವೇ ನಮ್ಮ ನೈಜಸ್ವಭಾವ.

ಹೆಸರಾಂತ ವಕೀಲರೂ ಸಹ ಆಗಿದ್ದ ಅಬ್ರಾಹಾಂ ಲಿಂಕನ್ ರವರು ಒಮ್ಮೆ ಯಾವುದೋ ಮೊಕದ್ದಮೆ ಹೂಡುವ ಸಿದ್ಧತೆಯಲ್ಲಿ ದ್ದರು. ಅದಕ್ಕೆ ಸಂಬಂಧಿಸಿದಂತೆ ಸಲಹೆ ಸೂಚನೆಗಳನ್ನು ಕೇಳುತ್ತಲೇ ಅದರ ಒಳಮರ್ಮವೆಲ್ಲ ಅರಿತ ಲಿಂಕನ್, ''ಕಾನೂನು ಪ್ರಕಾರ ಸರಿ, ಆದರೆ ನೈತಿಕವಾಗಿ ಅಲ್ಲ. ನಾನು ಖಂಡಿತವಾಗಿಯೂ ಇಂತಹ ಮೊಕದ್ದಮೆ ನಡೆಸಲಾರೆ. ವಕಾಲತ್ತು ಮಾಡುವಾಗ ನನ್ನ ಒಳ

ಮನಸ್ಸು 'ಲಿಂಕನ್, ನೀನೊಬ್ಬ ದೊಡ್ಡ ಸುಳ್ಳುಗಾರ, ವಂಚಕ ಎನ್ನುತ್ತಿರುತ್ತದೆ. ನನ್ನಿಂದ ಅದನ್ನು ಸಹಿಸಲಾಗದು. ಉದ್ಯೋಗಕ್ಕಾಗಿ ನನ್ನ ಸಮಯವನ್ನು ಮಾರುತ್ತೇನೆ, ಆದರೆ ಅಂತಃಕರಣವನ್ನಲ್ಲ' ಎಂದು ಗಂಭೀರವಾಗಿ ನುಡಿದರು. *('ಕೈತುತ್ತು', ಪು. ೭೮)* ನಮ್ಮ ಅಂತಃಸಾಕ್ಷಿಯು ಸಹಜವಾಗಿಯೇ ಋಜುಮಾರ್ಗದಲ್ಲಿ ನಡೆಯಲು ನಮ್ಮನ್ನು ಪ್ರೇರೇಪಿಸುತ್ತದೆ. ಆದರೆ ಆ ಧ್ವನಿಯನ್ನು ಗುರುತಿಸದೆ ಅಥವಾ ಕಿವಿಗೊಡದೆ ನಡೆಯುವ ಅಭ್ಯಾಸವಾದಲ್ಲಿ ಆ ಮನಃಸಾಕ್ಷಿಯ ಧ್ವನಿ ನಿಂತೇಹೋಗುತ್ತದೆ.

ತನ್ನ ಬಗ್ಗೆ ಉದಾತ್ತ ಕಲ್ಪನೆಯಿದ್ದರೆ ಜೀವನವೂ ಉದಾತ್ತವಾಗುತ್ತದೆ. ಆಗ ನೈತಿಕತೆಯು ಸ್ವಾಭಾವಿಕವಾಗಿ ಜೀವನದೊಂದಿಗೆ ಒಂದಾಗಿಬಿಡುತ್ತದೆ. ಭ್ರಷ್ಟಾಚಾರ, ಕೊಲೆ ಸುಲಿಗೆ, ಅತ್ಯಾಚಾರ, ಅನಾಚಾರ, ಮಾರಕಾಸ್ತ್ರಗಳು ಇತ್ಯಾದಿಗಳಿಗೆಲ್ಲಾ ನೈತಿಕತೆ ಕುಸಿಯುತ್ತಿರುವುದೇ ಮುಖ್ಯ ಕಾರಣವಾಗಿದೆ. ಎಲ್ಲರೂ ಸುಳ್ಳು, ವಂಚನೆ, ಹಿಂಸೆ, ಕಳ್ಳತನ ಇತ್ಯಾದಿಗಳಲ್ಲಿ ತೊಡಗಿದ್ದರೆ ಅಂತಹ ಸಮಾಜದಲ್ಲಿ ಯಾರೂ ನೆಮ್ಮದಿಯಿಂದ ಇರಲಾರರು. ''ಪ್ರಪಂಚದಲ್ಲಿ ಎಲ್ಲೇ ಕೆಟ್ಟದಿದ್ದರೂ ಪ್ರತಿಯೊಬ್ಬನೂ ಅದಕ್ಕೆ ಜವಾಬ್ದಾರ'' *(ಕೃತಿಶ್ರೇಣಿ, ಸಂ.೭, ಪು.೩೦೨)* ಎನ್ನುವ ಸ್ವಾಮಿ ವಿವೇಕಾನಂದರ ನುಡಿಯ ಕುರಿತು ನಾವೆಲ್ಲರೂ ಆಳವಾಗಿ ಚಿಂತಿಸಬೇಕಲ್ಲವೆ?

ವಿಶಾಖಪಟ್ಟಣದ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಸುಬ್ರಹ್ಮಣ್ಯಶಾಸ್ತ್ರಿಯವರು ಕ್ಯಾಂಪಸ್ಸಿನ ಸಮೀಪವೇ ಇದ್ದ ಓರ್ವ ಮೋಚಿಯ ಬಳಿ ಮುಂಗಡ ಹಣಕೊಟ್ಟು ಚಪ್ಪಲಿ ಹೊಲಿಸುತ್ತಿದ್ದರು. ಒಮ್ಮೆ ಹಾಗೆ ಹಣ ಕೊಟ್ಟ ಮರುದಿನದಿಂದ ಒಂದು ತಿಂಗಳಾದರೂ ಕಾಣಿಸಲಿಲ್ಲ. ಶಾಸ್ತ್ರಿಗಳು ರೂ. ೫೦-೬೦ ತಾನೇ ಎಂದು ಮರೆತೇಬಿಟ್ಟರು. ಅದಾದ ಎರಡು ವಾರಗಳಲ್ಲಿ ಒಬ್ಬ ಯುವಕ ಶಾಸ್ತ್ರಿಗಳ ಮನೆಗೆ ಬಂದು ಮೋಚಿ ತೀರಿಹೋದನೆಂದು, ತಾನು ಅವರ ಮಗನೆಂದು ಪರಿಚಯ ಮಾಡಿಕೊಂಡ. ತಂದೆ ಸಾಯುವ ಮೊದಲು ಹಣ ಅಥವಾ ಚಪ್ಪಲಿ ಹಿಂತಿರುಗಿಸೆಂದು ಮಗನಿಂದ ಭಾಷೆ ತೆಗೆದುಕೊಂಡಿದ್ದ. ಶಾಸ್ತ್ರಿಗಳು ಎಷ್ಟೇ ಬೇಡವೆಂದರೂ ತಂದೆಗಿತ್ತ ಭಾಷೆಗೆ ಅನುಸಾರವಾಗಿ ಮಗ ಸಾಲ ತೀರಿಸಿದ! *('ಕೈತುತ್ತು', ಪು. ೫೨)*

### ಕೌಟುಂಬಿಕ ಜವಾಬ್ದಾರಿ

ಕೌಟುಂಬಿಕ ಜವಾಬ್ದಾರಿಯನ್ನು ಕುರಿತು ಶ್ರೀರಾಮಕೃಷ್ಣರು ಬಹಳ ಸುಂದರವಾಗಿ ಹೀಗೆ ವಿವರಿಸುತ್ತಾರೆ:

''ಮನುಷ್ಯನಿಗೆ ದೇವಋಣ, ಋಷಿಋಣ, ಮಾತೃಋಣ, ಪಿತೃಋಣ, ಸ್ತ್ರೀಋಣ ಮುಂತಾದ ಅನೇಕ ಋಣಗಳಿವೆ. ತಂದೆ ತಾಯಿಗಳು ಮಕ್ಕಳನ್ನು ಹೆತ್ತು, ಹೊತ್ತು, ಸಾಕಿ, ಸಲಹಿ, ಬೆಳೆಸುತ್ತಾರೆ. ಅವರು ಸುಪ್ರೀತರಾದ ಹೊರತು, ಅವರ ಋಣ ತೀರಿಸದ ಹೊರತು ಸಾಧನೆ ಕರ್ಮಗಳಾವುವೂ ಫಲ ಬಿಡದು, ಏನನ್ನೂ ಸಾಧಿಸಲು ಆಗುವುದಿಲ್ಲ. ಸತಿಯ ಋಣ ತೀರಿಸಬೇಕಾದ್ದೆ. ಆಕೆ ಬದುಕಿರುವವರೆಗೆ ಅನ್ನಾಹಾರಾದಿಗಳನ್ನು ಒದಗಿಸುವುದು ಪತಿಯ ಜವಾಬ್ದಾರಿ. *(ವಚನವೇದ, ಭಾಗ ೧, ಪು.೪೫೦-೫೧).* ಮಕ್ಕಳು ತಮ್ಮ ಕಾಲ ಮೇಲೆ ತಾವೇ ನಿಂತುಕೊಳ್ಳಲು ಸಮರ್ಥರಾಗುವವರೆಗೆ ಅವರನ್ನು ನೋಡಿಕೊಳ್ಳಬೇಕು. ಹೆಣ್ಣು ಮಕ್ಕಳಿಗೆ ವಿವಾಹ ಮಾಡುವವರೆಗೂ ತಂದೆತಾಯಿಗಳ ಜವಾಬ್ದಾರಿ.'' *(ಅಲ್ಲೇ, ಪು. ೪೮).*

### ಕೆಲಸದಲ್ಲಿ ಜವಾಬ್ದಾರಿ

'ಸೋಮಾರಿತನವು ಮನುಷ್ಯನ ಶರೀರದಲ್ಲಿ ನೆಲೆಸಿರುವ ಮಹಾಶತ್ರು. ಉದ್ಯೋಗ ಪ್ರವೃತ್ತಿಯಂಥ ಬಂಧು ಬೇರೊಬ್ಬನಿಲ್ಲ. ಉದ್ಯೋಗಶೀಲದಿಂದ ಮನುಷ್ಯನಿಗೆ ಸಾವೆಂಬುದೇ ಇಲ್ಲ' ಎಂಬ ಭರ್ತೃಹರಿಯ ಈ ಹೇಳಿಕೆ, ಆಹಾರದಂತೆ ಕೆಲಸವೂ ಕೂಡ ಜೀವನದ ಒಂದು ಮೂಲಭೂತ ಆವಶ್ಯಕತೆ ಎಂಬುದನ್ನು ದೃಢಪಡಿಸುತ್ತದೆ.

ವ್ಯಕ್ತಿಯು ಕೆಲಸದ ಮೂಲಕವೇ ತನ್ನ ಅಂತಃಸಾಮರ್ಥ್ಯವನ್ನು, ಪ್ರತಿಭೆಯನ್ನು ಹೊರಗೆ ವ್ಯಕ್ತಪಡಿಸುವುದು ಸಾಧ್ಯ, ಮತ್ತು ಅವುಗಳ ಅಭಿವ್ಯಕ್ತಿ ವ್ಯಕ್ತಿತ್ವದ ಬೆಳವಣಿಗೆಗೆ ಅತ್ಯಗತ್ಯ. ಕಷ್ಟಪಟ್ಟು ದುಡಿಯದ ಹೊರತು ಏನೂ ದೊರೆಯದು ಎಂಬ ಸನಾತನ ನಿಯಮವನ್ನು ಮರೆಯಬಾರದು. ಈ ಪ್ರಪಂಚವೇ ಒಂದು ವಿರಾಟ್ ಯಜ್ಞ. ನಮ್ಮ ನಮ್ಮ ಕಾರ್ಯಕ್ಷೇತ್ರಗಳಲ್ಲಿ ನಾವು ಮಾಡುತ್ತಿರುವ ಕೆಲಸಗಳೆಲ್ಲವೂ ಈ ವಿರಾಟ್ ಯಜ್ಞದ ಒಂದು ಭಾಗ ಎಂಬ ಭಾವನೆಯಿಂದ ಮಾಡಬೇಕು. ಸಮಾಜದಿಂದ ನಾವು ಏನೆಲ್ಲಾ ಪಡೆದಿದ್ದೇವೋ ಅದಕ್ಕೆ ಪ್ರತಿಯಾಗಿ ನಾವು ಈ ರೂಪದಲ್ಲಿ ನೀಡುತ್ತಿದ್ದೇವೆ. ಇದೊಂದು ಕರ್ಮಯಜ್ಞವೆಂಬ ಭಾವವಿದ್ದರೆ ಕೆಲಸದಲ್ಲಿ ತಾನಾಗಿಯೇ ಅಚ್ಚುಕಟ್ಟು, ಆಸ್ಥೆ, ಪ್ರಾಮಾಣಿಕತೆ, ಕುಶಲತೆ ಎಲ್ಲವೂ ವ್ಯಕ್ತವಾಗುತ್ತದೆ. ''ಕುಳಿತು ತುಕ್ಕು ಹಿಡಿಯುವುದಕ್ಕಿಂತ ದುಡಿದು ಸವೆಯುವುದು ಮೇಲು.'' *(ಕೃತಿಶ್ರೇಣಿ, ಸಂ.೫, ಪು.೬೨)* ''ಕೆಲಸ, ಕೆಲಸ, ಕೆಲಸ. ಕಾಡುಹರಟೆ ಕೊನೆಗಾಣಲಿ.. ಪ್ರಾಣ ಹೋಗುವವರೆಗೂ ಕೆಲಸ! ಯಾರು ಬಲಹೀನರೋ ಅವರು ಬಹಳ ಉತ್ತಮ ಕೆಲಸಗಾರರಾಗಬೇಕು, ಪುರುಷ ಸಿಂಹರಾಗಬೇಕು'' *(ಕೃತಿಶ್ರೇಣಿ, ಸಂ.೪, ಪು.೨೫೪)* ಎಂಬ ಸ್ವಾಮಿ ವಿವೇಕಾನಂದರ ಕರೆಯನ್ನು ಆಲಿಸಬೇಕು. ಸಾಮಾಜಿಕ ಹಾಗೂ ನೈತಿಕ ಜವಾಬ್ದಾರಿಯ ಪ್ರಜ್ಞೆಯುಳ್ಳವನು ಸಹಜವಾಗಿಯೇ ಉತ್ತಮೋತ್ತಮ ರೀತಿಯಲ್ಲಿ ತನ್ನ ಕೆಲಸವನ್ನು ಮಾಡುತ್ತಾನೆ.

ಮತ್ತೊಂದು ಮುಖ್ಯ ವಿಷಯವೆಂದರೆ, ನಮ್ಮ ಉದ್ಯೋಗವನ್ನು ವೈಯಕ್ತಿಕ ಲಾಭಕ್ಕೆ ಬಳಸಬಾರದು. ಲಾಲ್‌ಬಹಾದ್ದೂರ್ ಶಾಸ್ತ್ರಿಗಳು ಪ್ರಧಾನಮಂತ್ರಿಯಾದಾಗ ಅವರ ಹಿರಿಯ ಮಗ ಹರಿಕೃಷ್ಣನಿಗೆ, ಅಶೋಕ್ ಲೇಲ್ಯಾಂಡ್ ಕಂಪೆನಿಯವರು ಸೀನಿಯರ್ ಜನರಲ್ ಮ್ಯಾನೇಜರ್ ಆಗಿ ಬಡ್ತಿ ನೀಡಿದರು. ಶಾಸ್ತ್ರಿಗಳು ತಕ್ಷಣ ಮಗನಿಗೆ ರಾಜಿನಾಮೆ ನೀಡಲು ಹೇಳಿದರು. ಅಷ್ಟೇ ಅಲ್ಲದೆ ತಾವು ಪ್ರಧಾನಿ

ಯಾಗಿರುವವರೆಗೆ ಆ ಕಂಪೆನಿಯಲ್ಲಿ ಕೆಲಸ ಮಾಡಬಾರದೆಮದು ಮಗನಿಗೆ ಆದೇಶಿಸಿದರು! *(‘ಕೈತುತ್ತು’, ಪು. ೬)*

ಸರ್ ಎಂ. ವಿಶ್ವೇಶ್ವರಯ್ಯನವರು ಮೈಸೂರು ಮಹಾರಾಜರಿಂದ ಬಂದ ದಿವಾನ್ ಪದವಿಯ ಆದೇಶ ಒಪ್ಪಿಕೊಳ್ಳುವ ಮುನ್ನವೇ ತಾಯಿಯ ಬಳಿ ತಮ್ಮ ಕುಟುಂಬದವರಿಗೆ, ಬಂಧುಮಿತ್ರರಿಗೆ ಸರ ಕಾರಿ ಸೌಲಭ್ಯ, ನೌಕರಿ ಇತ್ಯಾದಿಗಳನ್ನು ಕೇಳಬಾರದೆಂದು ಹಾಗೂ ತಮ್ಮ ಹೆಸರನ್ನು ಯಾವುದೇ ರೀತಿಯಲ್ಲೂ ಬಳಸಬಾರದೆಂದು ಭಾಷೆ ತೆಗೆದುಕೊಂಡ ಜ್ವಲಂತ ಉದಾಹರಣೆ ನಮ್ಮೆಲ್ಲರ ಕಣ್ಣ ಮುಂದೆ ಇದ್ದೇ ಇದೆ. ಸಮಾಜದ ಹಣ ಎಂದರೆ ಬೆಂಕಿಯಂತೆ – ಹೆಚ್ಚು ಕಾಲ ನಮ್ಮೊಂದಿಗೆ ಇಟ್ಟುಕೊಳ್ಳಬಾರದು ಹಾಗೂ ಸ್ವಂತಕ್ಕೆ ಬಳಸಬಾರದು ಎಂಬುದನ್ನು ಮರೆಯಬಾರದು.

### ಆಧ್ಯಾತ್ಮಿಕ ಜವಾಬ್ದಾರಿ

‘‘ಸೂರ್ಯನ ಕೆಳಗೆ ಇರುವ ಪ್ರತಿಯೊಂದು ವಸ್ತುವನ್ನು ಹೊಂದಿದ್ದರೂ ಅಧ್ಯಾತ್ಮವಿಲ್ಲದೆ ಇದ್ದರೆ ಪ್ರಯೋಜನವೇನು?’’ *(ಕೃತಿಶ್ರೇಣಿ, ಸಂ.೭, ಪು.೨೮೧)* ‘‘ಶ್ರೇಷ್ಠವಾದ ಜ್ಞಾನವೇ ಅಧ್ಯಾತ್ಮ ವಿದ್ಯೆ. ಅಧ್ಯಾತ್ಮ ವಿದ್ಯೆಯಿಂದ ಆನಂದ ಪ್ರಾಪ್ತಿ.’’ *(ಕೃತಿಶ್ರೇಣಿ, ಸಂ.೬, ಪು.೩೭೭, ೪೧೨)* ಎನ್ನುತ್ತಾರೆ ಸ್ವಾಮೀಜಿ. ಗೀತೆಯಲ್ಲೂ ಶ್ರೀಕೃಷ್ಣನು, **‘ಅಧ್ಯಾತ್ಮ ವಿದ್ಯಾ ವಿದ್ಯಾನಾಂ...’** *(೧೦.೩೨)* ಎಂದು ಅಧ್ಯಾತ್ಮ ವಿದ್ಯೆಯ ಶ್ರೇಷ್ಠತೆಯನ್ನೇ ಹೇಳುತ್ತಿದ್ದಾನೆ.

ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಆಧ್ಯಾತ್ಮಿಕ ಅಂಶವಿದೆ. ಅದೇ ಅವನ ನಿಜವಾದ ಸ್ವರೂಪ. ‘‘ಸುಪ್ತವಾದ ದಿವ್ಯತೆಯನ್ನು ವ್ಯಕ್ತ ಪಡಿಸುವುದೇ ಧರ್ಮದ ಸರ್ವಸ್ವ.’’ *(ಕೃತಿಶ್ರೇಣಿ, ಸಂ.೨, ಪು.೩೧೦)* ಈ ಸ್ವರೂಪದ ಅಭಿವ್ಯಕ್ತಿಯಿಂದ ವ್ಯಕ್ತಿತ್ವದಲ್ಲಿ ಸಾಮರಸ್ಯ ಉಂಟಾ ಗುತ್ತದೆ. ಈಗ ನಮ್ಮ ಆಲೋಚನೆ, ಭಾವೋದ್ವೇಗಗಳು, ಸಂಸ್ಕಾರ ಗಳು, ಆಸೆ, ಆಕಾಂಕ್ಷೆಗಳು ನಮ್ಮನ್ನು ಆಳುತ್ತಿರುವುವು. ನಾವು ಎಚ್ಚೆತ್ತು ನಮ್ಮ ವ್ಯಕ್ತಿತ್ವದ ಒಡೆತನವನ್ನು ಸ್ಥಾಪಿಸಬೇಕು. ಇಂದ್ರಿಯ, ಮನಸ್ಸು, ಭಾವನೆ ಇತ್ಯಾದಿಗಳನ್ನು ನಿಯಂತ್ರಿಸಿ ಅವು ನಮ್ಮ ಅಪ್ಪಣೆಯಂತೆ ವರ್ತಿಸುವಂತೆ ಮಾಡಬೇಕು. ನಮ್ಮ ನಿಜವಾದ ಆಧ್ಯಾತ್ಮಿಕ ಸ್ವರೂಪವನ್ನು ಅರಿತಾಗ ಮೋಕ್ಷ ಪ್ರಾಪ್ತಿಯಾಗುವುದು.

‘‘ಸ್ವಾಮೀಜಿ, ನಾವೇಕೆ ಇಲ್ಲಿದ್ದೇವೆ? ಜೀವನಕ್ಕೇನು ಅರ್ಥ?’’ ಎಂಬ ವಿದ್ಯಾರ್ಥಿಯೋರ್ವನ ಪ್ರಶ್ನೆಗೆ ಸ್ವಾಮಿ ವಿವೇಕಾನಂದರು, ‘‘ಈ ಪ್ರಶ್ನೆಗಳಿಗೆ ಉತ್ತರ ಹುಡುಕಲಿಕ್ಕೇ ಇಲ್ಲಿರುವೆ’’ ಎಂದರು. ಎಂತಹ ಅರ್ಥಗರ್ಭಿತ ಉತ್ತರ! ಶಂಕರಭಗವತ್ಪಾದರ ಈ ಕೆಳಗಿನ ನುಡಿಯೂ ಇದನ್ನೇ ಪುಷ್ಟೀಕರಿಸುತ್ತದೆ:

**ಇತಃ ಕೋ ನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ।**
**ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಮ್॥**

*(‘ವಿವೇಕಚೂಡಾಮಣಿ’, ೫)*

(ಮನುಷ್ಯನಾಗಿ ಜನಿಸಿ, ಪುರುಷತ್ವವನ್ನು ಹೊಂದಿಯೂ ತನ್ನ ಮೋಕ್ಷ ಪಡೆಯಲು ಪ್ರಯತ್ನ ಮಾಡದೆ ಆಲಸ್ಯ ಮಾಡುವವನಿಗಿಂತ ಇನ್ನು ದೊಡ್ಡ ಮೂರ್ಖ ಯಾರಿರಲು ಸಾಧ್ಯ?)

ಆಧ್ಯಾತ್ಮಿಕ ಪ್ರಜ್ಞೆಯೊಂದು ಜಾಗೃತವಾದರೆ ಉಳಿದೆಲ್ಲ ರೀತಿಯ ಜವಾಬ್ದಾರಿಗಳು ವ್ಯಕ್ತಿಯಲ್ಲಿ ತಾನೇತಾನಾಗಿ ಮೇಳೈಸುವುದು. ರಾಣಿ ಜೇನನ್ನು ಉಳಿದೆಲ್ಲಾ ಜೇನುಗಳು ಅನುಸರಿಸುವಂತೆ ಇದು. ಎಲ್ಲ ಜಯಗಳಿಗಿಂತ ಆತ್ಮಜಯವೇ ಶ್ರೇಷ್ಠ. ಈ ಆತ್ಮಜಯ ಪಡೆದ ವ್ಯಕ್ತಿಯ ನೆಲೆಯನ್ನು ಶ್ರೀಕೃಷ್ಣನು ಸುಂದರವಾಗಿ ಈ ಕೆಳಗಿನ ಶ್ಲೋಕ ದಲ್ಲಿ ವಿವರಿಸಿದ್ದಾನೆ!

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ॥** *(೬.೨೨)*

‘ಈ ಸುಖವನ್ನು ಪಡೆದ ಮೇಲೆ ಇದಕ್ಕಿಂತ ಶ್ರೇಷ್ಠ ಸುಖ ಇನ್ನೊಂದಿದೆ ಎಂದು ಅವನಿಗನಿಸುವುದಿಲ್ಲ. ಈ ಸುಖದಲ್ಲಿ ನೆಲೆಸಿದ ಮೇಲೆ ಎಂಥ ದುಃಖದಿಂದಲೂ ಅವನು ವಿಚಲಿತನಾಗುವುದಿಲ್ಲ’ ಇಂತಹ ಸ್ಥಿತಿಯನ್ನು ಪಡೆಯಲು ನಾವೂ ಧಾವಿಸೋಣವೆ?

### ಉಪಸಂಹಾರ

ಒಬ್ಬ ವ್ಯಕ್ತಿಯಲ್ಲಿ ಈ ಕೆಲವು ಲಕ್ಷಣಗಳು ಕಂಡುಬಂದಲ್ಲಿ ಆತನು ಜವಾಬ್ದಾರಿಯುಕ್ತ ವ್ಯಕ್ತಿ ಎಂದು ಗುರುತಿಸಬಹುದು:

- *ತನ್ನ ಸ್ಥಿತಿಗೆ ಇತರರನ್ನು ದೂರದಿರುವುದು.*
- *ಸನ್ನಿವೇಶದ ಪೂರ್ಣ ಪ್ರಯೋಜನವನ್ನು ಪಡೆಯುವುದು.*
- *ವಿರೋಧ ಪರಿಸ್ಥಿತಿಯ ಪ್ರಯೋಜನ ಪಡೆದು ಮುಂದುವರಿಯುವುದು.*
- *ಎಲ್ಲ ಮೂಲಗಳಿಂದಲೂ ಪಾಠ ಕಲಿಯುವುದು: ಸೂಕ್ಷ್ಮ ದೃಷ್ಟಿ.*

ಜವಾಬಾರಿಯುತ ಪ್ರಜೆಗಳನ್ನು ರೂಪಿಸುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ. ✷

**ನನಗೆ ಅಧ್ಯಾತ್ಮದಲ್ಲಿ ಆನಂದ ದೊರಕದಿದ್ದರೆ ಇಂದ್ರಿಯದಲ್ಲಿ ಆನಂದವನ್ನು ಅರಸಬೇಕೆ? ಅಮೃತ ಸಿಕ್ಕದೆ ಇದ್ದರೆ ಚರಂಡಿಯ ನೀರನ್ನು ಕುಡಿಯಬೇಕೆ? ಚಾತಕ ಪಕ್ಷಿ ಯಾವಾಗಲೂ ಮಳೆಯ ನೀರನ್ನು ಮಾತ್ರ ಕುಡಿಯುವುದು; ನೀರು, ಶುದ್ಧ ನೀರು ಬೇಕೆಂದು ಹಾರಾಡುತ್ತಿರುವುದು. ಎಂತಹ ಬಿರುಗಾಳಿ ಬರಲಿ, ಏನೇ ಆಗಲಿ, ಅದು ನೆಲಕ್ಕೆ ಇಳಿದು ಇಲ್ಲಿರುವ ನೀರನ್ನು ಕುಡಿಯುವುದಿಲ್ಲ.**

**–ಸ್ವಾಮಿ ವಿವೇಕಾನಂದ**

# ಗುರುವಿನ ರೂಪದಲ್ಲಿ ಗುರುಮಹಾರಾಜರು

**ತ**ಮಿಳುನಾಡಿನ ಪ್ರಸಿದ್ಧ ತೀರ್ಥಕ್ಷೇತ್ರ ಮದುರೈ ಮೀನಾಕ್ಷಿ ದೇವಿಯು ಸುಂದರೇಶ್ವರನನ್ನು ತನ್ನ ತಪಸ್ಸಿನಿಂದ ಒಲಿಸಿಕೊಂಡ ಪವಿತ್ರಭೂಮಿ. ಅಸಂಖ್ಯ ಭಕ್ತರು ಮೀನಾಕ್ಷಿದೇವಿಯ ದರ್ಶನ ಪಡೆಯಲು ಇಲ್ಲಿಗೆ ಬರುತ್ತಾರೆ. ಶ್ರದ್ಧೆ, ಭಕ್ತಿಗಳಿಂದ ದೇವಿಯ ಪೂಜೆಯನ್ನು ಮಾಡಿ ಅವಳ ಕೃಪೆಗೆ ಪಾತ್ರರಾಗುತ್ತಾರೆ. ದೇವಿಯ ದೇವಸ್ಥಾನವನ್ನು ಕೇಂದ್ರವಾಗಿರಿಸಿಕೊಂಡು ಈ ನಗರದ ನಿವಾಸಿಗಳು ದೈನಂದಿನ ಜೀವನವನ್ನು ಸಾವಿರಾರು ವರ್ಷಗಳಿಂದ ನಡೆಸಿಕೊಂಡು ಬಂದಿದ್ದಾರೆ.

ಮದುರೈ ಕ್ಷೇತ್ರದಿಂದ ಸುಮಾರು ೬೦ ಕಿ.ಮೀ. ದೂರದಲ್ಲಿದೆ ಶಿವಕಾಶಿ. ಅಲ್ಲಿಗೆ ಸಮೀಪದ ಕೋಣಂಪಟ್ಟಿಯೆಂಬ ಗ್ರಾಮದಲ್ಲಿ ಶ್ರೀರಾಮಕೃಷ್ಣ ಮಠದ ಪ್ರೇರಣೆಯಿಂದ ಪ್ರಾರಂಭವಾದ ಶಾರದಾ ಆಶ್ರಮವಿದೆ. ಶ್ರೀಶಾರದಾದೇವಿಯವರ ೧೫೦ನೇ ಜನ್ಮ ಮಹೋತ್ಸವದ ಸಂದರ್ಭದಲ್ಲಿ ಈ ಆಶ್ರಮದ ಭಕ್ತರು ಶ್ರೀಮಾತೆಯ ಜನ್ಮಸ್ಥಳ ಜಯರಾಂಬಾಟಿಯನ್ನು ಅನುಕರಿಸಿ, ಅದೇ ರೀತಿಯಲ್ಲಿ ಶ್ರೀಮಾತೆಗೆ ಮನೆಯನ್ನು ಕಟ್ಟಿದ್ದಾರೆ. ಪರಮಪೂಜ್ಯ ಸ್ವಾಮಿ ಸ್ಮರಣಾನಂದಜಿಯವರು ಈ ದಕ್ಷಿಣದೇಶದ ಶ್ರೀಮಾತೆಯ ನಿವಾಸವನ್ನು ಉದ್ಘಾಟಿಸಿದರು.

ಕೋಣಂಪಟ್ಟಿ ಬಳಿ ಮೇಟ್ಟಮಲ್ಲೈ ಎಂಬ ಒಂದು ಸಣ್ಣ ಹಳ್ಳಿಯಿದೆ. ಅಲ್ಲಿನ ಸಾಧಾರಣ ಮಹಿಳೆಯೊಬ್ಬಳ ಜೀವನದಲ್ಲಿ ನಡೆದ ಒಂದು ಅನುಪಮ ಘಟನೆಯೇ ಈ ಲೇಖನದ ವಸ್ತು.

ಕೋಣಂಪಟ್ಟಿ ಆಶ್ರಮದ (ಖಾಸಗಿ ಸಂಸ್ಥೆ) ಪ್ರಭಾವದಿಂದ ಅಲ್ಲಿನ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ಜನರೆಲ್ಲ ಶ್ರೀರಾಮಕೃಷ್ಣ ಮಠದಿಂದ ಹಮ್ಮಿಕೊಂಡಿದ್ದ 'ಮನೆಗೊಂದು ಸತ್ಸಂಗ' ಎಂಬ ಕಾರ್ಯಕ್ರಮದ ಪರಿಣಾಮವಾಗಿ ದಿವ್ಯತ್ರಯರ ಭಾವಚಿತ್ರ ಈ ಗ್ರಾಮಗಳ ಮನೆ ಮನೆಯಲ್ಲೂ ವಿರಾಜಿಸುತ್ತಿದೆ. ದಿವ್ಯತ್ರಯರ ಜೀವನ-ದರ್ಶನವೇ ಇವರೆಲ್ಲರ ಮನೆಮಾತು. ಈ ಗ್ರಾಮಗಳಲ್ಲಿ ನಡೆಯುವ ಸತ್ಸಂಗಗಳಲ್ಲಿ ಗ್ರಾಮಸ್ಥರೆಲ್ಲರೂ ಪಾಲ್ಗೊಳ್ಳುತ್ತಾರೆ. ದಿವ್ಯತ್ರಯರ ಭಜನೆ ಹಾಗೂ 'ವಚನವೇದ'ದ ವಾಚನ ಎಲ್ಲ ಮನೆಗಳಲ್ಲೂ ಕೇಳಿ ಬರುತ್ತದೆ. ಇದು ಶ್ರೀರಾಮಕೃಷ್ಣ ಲೋಕದ ವರ್ಣನೆಯೋ ಎಂಬಂತೆ ಈ ಹಳ್ಳಿಯ ಅತ್ಯಂತ ಸರಳ ಭಕ್ತರು ಶ್ರೀರಾಮಕೃಷ್ಣಮಯ ಜೀವನ ನಡೆಸುತ್ತಿದ್ದಾರೆ.

ಮೇಟ್ಟಮಲ್ಲೈ ಗ್ರಾಮದ ಇಲಂಜಿಯಮ್ಮಾಳ್ ಶ್ರೀರಾಮಕೃಷ್ಣರ ದಿವ್ಯಕೃಪೆಗೆ ಪಾತ್ರಳಾದ ವಿವರವನ್ನು ಓದಿದಾಗ, ಪ್ರಾರ್ಥನೆ ಹಾಗೂ ಶ್ರದ್ಧೆಯಿಂದ ಅಸಾಧ್ಯವೂ ಸಿದ್ಧಿಸುತ್ತದೆ ಎಂಬ ನಂಬಿಕೆ ಎಲ್ಲರಿಗೂ ಬರುತ್ತದೆ.



ಈಕೆಯ ವಯಸ್ಸು ೬೦. ಎಲ್ಲ ಹಳ್ಳಿಯವರಂತೆ ಈಕೆಯೂ ಕಪಟವರಿಯದ ಸರಳ ಮಹಿಳೆ. ಹೆಚ್ಚು ಓದುಬರಹ ಅರಿಯದ ಈಕೆ ತೃಪ್ತಿಯಿಂದ ಜೀವನ ಸಾಗಿಸುತ್ತಿದ್ದಳು. ಆದರೆ ಕಷ್ಟವೆಂಬುದು ಯಾರಿಗೂ ತಪ್ಪಿದ್ದಲ್ಲ. ಅಂತಹ ಒಂದು ಕಠಿನ ಪರಿಸ್ಥಿತಿ ಈಕೆಗೂ ಬಂದಿತು. ಇದ್ದಕ್ಕಿದ್ದಂತೆ ಈಕೆಗೆ ಕೆಮ್ಮು ಪ್ರಾರಂಭವಾಗಿ ಹಲವು ತಿಂಗಳೇ ಆದರೂ ಗುಣವಾಗದೆ ಹೋಯಿತು. ಜೊತೆಗೆ ಉಸಿರಾಡುವಾಗಲೂ ಕಷ್ಟವಾಗತೊಡಗಿತು. ತನಗೆ ತಿಳಿದಿದ್ದ ಮನೆಯ ಮದ್ದುಗಳನ್ನು, ಪಥ್ಯಗಳನ್ನು ಮಾಡಿ ಗುಣವಾಗದೆ, ಪಕ್ಕದ ಕಾತ್ತೂರ್ ಗ್ರಾಮದ ವೈದ್ಯರ ಬಳಿಗೆ ಹೋದಳು. ವೈದ್ಯರು x-ray ಹಾಗೂ scan ಪರೀಕ್ಷೆಗಳ ಮೂಲಕ ಅವಳ ಶ್ವಾಸಕೋಶದಲ್ಲಿ ಒಂದು ಗಡ್ಡೆ ಬೆಳೆದಿದೆ ಎಂದು ಪತ್ತೆಹಚ್ಚಿದರು. ಮದುರೈ ನಗರದಲ್ಲಿ ಚಿಕಿತ್ಸೆ ಮುಂದುವರೆಸಲು ಸೂಚಿಸಿದರು ವೈದ್ಯರು. ಮದುರೈಗೆ ಬಂದು ಪ್ರಸಿದ್ಧವಾದ ಆಸ್ಪತ್ರೆಯಲ್ಲಿ ಪರೀಕ್ಷಿಸಿಕೊಂಡಾಗ, ಇದು ಕ್ಯಾನ್ಸರ್ ಎಂಬ ಭಯಾನಕ ವಿಚಾರ ತಿಳಿಯಿತು. ಮಹಿಳೆಗೆ ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಂತಾಗಿ, ಮುಂದೆ ಏನು ಮಾಡುವುದು ಎಂದು ತೋರದೆ ಕಂಗಾಲಾದಳು.

ಆ ಮಹಿಳೆ ಚೆನ್ನೈನ ಅಡ್ಯಾರ್‌ನಲ್ಲಿರುವ ಕ್ಯಾನ್ಸರ್ ಇನ್‌ಸ್ಟಿಟ್ಯೂಟ್‌ನಲ್ಲಿ ಚಿಕಿತ್ಸೆಯನ್ನು ಮುಂದುವರೆಸಿದಳು. ಕಿಮೋಥೆರಪಿ

ಮುಂತಾದ ಚಿಕಿತ್ಸೆಗಳಿಂದಾಗಿ ಪ್ರತಿದಿನ ಮುನ್ನೂರು ರೂಪಾಯಿಗಳ ಔಷಧಿಯನ್ನು ತೆಗೆದುಕೊಳ್ಳಬೇಕೆಂದು ಚೆನ್ನೈನ ವಿಶೇಷತಜ್ಞರು ತಿಳಿಸಿದರು. ತನ್ನ ಬಳಿ ಕೂಡಿಟ್ಟಿದ್ದ ಹತ್ತುಸಾವಿರ ರೂಪಾಯಿಗಳಿಗೆ ಔಷಧಿಯನ್ನು ಕೊಂಡುಕೊಂಡು, ಇಳಂಜಿಯಮ್ಮಾಳ್ ಗ್ರಾಮಕ್ಕೆ ಮರಳಿದಳು.

ಕ್ಯಾನ್ಸರ್ ಭಯ, ವಾಸಿಯಾಗದ ಕೆಮ್ಮು, ಎದೆನೋವು ಹಾಗೂ ಇಷ್ಟೊಂದು ಔಷಧಗಳ ಸೇವನೆಯಿಂದ ಆಗುತ್ತಿದ್ದ ಆಯಾಸ ದಿಂದಾಗಿ ಈಕೆ ನಿತ್ರಾಣಳಾದಳು. ಊರಿಂದ ಊರಿಗೆ, ಒಂದು ಆಸ್ಪತ್ರೆಯಿಂದ ಮತ್ತೊಂದು ಆಸ್ಪತ್ರೆಗೆ – ಹೀಗೆ ಅಲೆದಲೆದು ಆಕೆಯ ಬಳಿಯಿದ್ದ ಹಣವೆಲ್ಲ ತೀರಿಹೋಗಿತ್ತು. ತನುಮನವೆರಡೂ ಆಯಾಸಗೊಂಡಿದ್ದವು. ಇನ್ನು ಮುಂದೆ ಔಷಧಕ್ಕಾಗಿ ಹಣವನ್ನು ಎಲ್ಲಿಂದ ತರಲಿ ಎಂದು ಯೋಚಿಸುತ್ತಿದ್ದ ಈಕೆಗೆ ಇದ್ದಕ್ಕಿದ್ದಂತೆ ಮನಸ್ಸಿನಲ್ಲಿ ಒಂದು ದೃಢಸಂಕಲ್ಪ ಮೂಡಿತು. 'ನನ್ನಿಂದ ಈ ರೋಗದ ಪರಿಹಾರಕ್ಕಾಗಿ ವ್ಯಯಮಾಡಲು ಆಗದು. ನನ್ನ ಮನೆಯಲ್ಲಿ ಪ್ರತಿನಿತ್ಯ ಪೂಜೆಯನ್ನು ಸ್ವೀಕರಿಸುತ್ತಿರುವ ಶ್ರೀಗುರುಮಹಾರಾಜರೇ ನನ್ನನ್ನು ಕಾಪಾಡುತ್ತಾರೆ' ಎಂಬ ದೃಢವಿಶ್ವಾಸ ಅವಳಲ್ಲಿ ಮೂಡಿತು. 'ಹಾಗಿದ್ದರೆ ಇನ್ನು ಮೇಲೆ ನಾನು ಯಾವುದೇ ಔಷಧವನ್ನು ತೆಗೆದುಕೊಳ್ಳಲಾರೆ' ಎಂದು ನಿರ್ಧರಿಸಿ, ಅವಳು ಸಂಪೂರ್ಣವಾಗಿ ಶ್ರೀರಾಮಕೃಷ್ಣರಲ್ಲಿ ಶರಣಾದಳು.

ಶ್ರೀರಾಮಕೃಷ್ಣರು ಶರಣಾಗತರ ಕೈ ಬಿಡುವರೆ? ಅವರು ಕಲ್ಪತರುವಲ್ಲವೆ? ಪ್ರೇಮರೂಪರಲ್ಲವೆ? ಈಕೆಯ ಸರಳ ಮನಸ್ಸಿನ ಭಕ್ತಿ, ಶ್ರದ್ಧೆಯನ್ನು ಮೆಚ್ಚಿದ ಗುರುಮಹಾರಾಜರು ಕೃಪೆಮಾಡಿದರು. ಒಂದು ರಾತ್ರಿ ಆಕೆ ಕನಸಿನಲ್ಲಿ ಒಬ್ಬರು ಹಿರಿಯರನ್ನು ಕಂಡಳು. ಅವರು ಈಕೆಗೆ ಕೈಚಾಚುವಂತೆ ಹೇಳಿ, ಅವಳ ಕೈಯಲ್ಲಿ ಒಂದು ಔಷಧಿಯನ್ನು ಇಟ್ಟರು. ಅದನ್ನು ತಿನ್ನಲು ಹೇಳಿದಾಗ ಈಕೆ ಅದನ್ನು ತಿಂದಳು. ಕೂಡಲೇ ಅವಳಿಗೆ ಕೆಮ್ಮು ಬಂದು, ಕಫದೊಂದಿಗೆ ಹುಣ್ಣಿನ ಗಡ್ಡೆಯೂ ಹೊರಬಂದಂತೆ ಕನಸುಕಂಡಳು. ಔಷಧವನ್ನು ನೀಡಿದ ಹಿರಿಯ ವ್ಯಕ್ತಿ ಶ್ರೀರಾಮಕೃಷ್ಣರೇ ಎಂದು ಆಕೆ ದೃಢವಾಗಿ ನಂಬಿದಳು. ಇನ್ನೂ ಹೆಚ್ಚಾಗಿ ಗುರುಮಹಾರಾಜರ ನಾಮಸ್ಮರಣೆಯನ್ನು ಮಾಡಲಾರಂಭಿಸಿದಳು. ನೋವು ಹಾಗೂ ರೋಗದ ಲಕ್ಷಣಗಳನ್ನು ಗಮನಿಸದೆ, ಅಚಲವಾದ ಶ್ರದ್ಧೆಯಿಂದ ನಾಮಸ್ಮರಣೆಯನ್ನು ಅವಳು ಮಾಡುತ್ತಿದ್ದಳು.

ಇಷ್ಟರಲ್ಲಿ ಬಳಿಯಿರುವ ಕೊಯಂಬತ್ತೂರಿನ ಶ್ರೀರಾಮಕೃಷ್ಣ ಮಿಷನ್ ವಿದ್ಯಾಲಯದಲ್ಲಿ ದೀಕ್ಷೆಯ ಕಾರ್ಯಕ್ರಮವಿರುವುದಾಗಿ ಸತ್ಸಂಗದ ಕಾರ್ಯಕ್ರಮದಲ್ಲಿ ತಿಳಿದುಬಂದಾಗ ಈಕೆಗೂ ದೀಕ್ಷೆಯನ್ನು ಪಡೆಯಬೇಕೆಂಬ ತೀವ್ರ ಬಯಕೆಯುಂಟಾಯಿತು. ಎಲ್ಲ ವ್ಯವಸ್ಥೆಯೂ ಆಯಿತು. ದೀಕ್ಷೆಗಾಗಿ ಆಕೆ ಆ ಊರಿಗೆ ತೆರಳಿದಳು. ಆಶ್ರಮದಲ್ಲಿ ತಂಗುವ ವ್ಯವಸ್ಥೆಯಾಗಿತ್ತು.

ದೀಕ್ಷೆಯ ದಿನದಂದು ಪವಿತ್ರ ದೇವಸ್ಥಾನದಲ್ಲಿ ಕುಳಿತಾಗ ಶ್ರೀರಾಮಕೃಷ್ಣರ, ಶ್ರೀಮಾತೆಯ ಹಾಗೂ ಸ್ವಾಮೀಜಿಯ ಭಾವ ಚಿತ್ರಗಳ ಸಾನ್ನಿಧ್ಯದ ಅನುಭವ, ಗುರುಗಳು ಕಲಿಸಿಕೊಟ್ಟ ಪ್ರಾರ್ಥನೆ ಹಾಗೂ ಅವರು ಹೇಳುತ್ತಿದ್ದ ಆಧ್ಯಾತ್ಮಿಕ ವಿಚಾರಗಳನ್ನು ಕೇಳುತ್ತ ತನ್ಮಯಳಾಗಿದ್ದಾಗ ಅವಳಿಗೆ ಕೆಮ್ಮು ಪ್ರಾರಂಭವಾಗಿ, ಬಹಳ ತೊಂದರೆ ಅನುಭವಿಸತೊಡಗಿದಳು. ಮಧ್ಯದಲ್ಲಿ ಕೆಲವು ನಿಮಿಷಗಳ ವಿರಾಮವಿದ್ದಾಗ ಅವಳು ದೇವಸ್ಥಾನದ ಹೊರಗೆ ಬಂದಳು. ಇದ್ದಕ್ಕಿದ್ದಂತೆ ಈಕೆಗೆ ವಾಂತಿ ಬಂದು, ಕನಸಿನಲ್ಲಿ ಕಂಡಂತೆ ಗಡ್ಡೆ ಹೊರ ಬಂದಿತು. ಹೆಪ್ಪುಗಟ್ಟಿದ ರಕ್ತದಂತೆ ಕಪ್ಪಾಗಿದ್ದ ಗಡ್ಡೆಯು ಹೊರ ಬಂದಂತೆಯೇ ಅವಳಿಗೆ ಕೆಮ್ಮು ನಿಂತುಹೋಯಿತು. ನೋವು ಹಾರಿ ಹೋಗಿ, 'ಎಲ್ಲವೂ ಗುಣವಾಯಿತು' ಎಂಬ ಸಂತಸದ ಭಾವ ಮೂಡಿತು. ಕನಸು ನನಸಾಯಿತೆಂದು ಹರ್ಷಿಸುತ್ತ ಗುರುಗಳಿಂದ ದೀಕ್ಷೆಯನ್ನು ಪಡೆದು, ಈಕೆ ತನ್ನ ಹಳ್ಳಿಗೆ ಮರಳಿದಳು.

ಆ ಬಳಿಕ ಹಲವು ತಿಂಗಳಾದರೂ, ವ್ಯಾಧಿ ಮತ್ತೆ ಕಾಣಿಸಿಕೊಳ್ಳದೆ ಯಾವುದೇ ತೊಂದರೆಯಿಲ್ಲದೆ ಈಕೆ ಆನಂದದಿಂದ್ದಾಳೆ. ಶ್ರೀರಾಮಕೃಷ್ಣರೇ ಕೃಪೆ ಮಾಡಿದ್ದಾರೆ ಎಂದು ನಂಬಿರುವ ಈಕೆ ಸಂಪೂರ್ಣವಾಗಿ ಅವರಲ್ಲಿ ಶರಣಾಗತಳು. ಮುಗ್ಧವಾದ ಮನಸ್ಸು ಹಾಗೂ ಶ್ರದ್ಧೆಯಿದ್ದರೆ ಶ್ರೀರಾಮಕೃಷ್ಣರು ಒಲಿಯುತ್ತಾರೆ ಎಂದು ಇದರಿಂದ ತಿಳಿಯಬಹುದು. ಇಂದಿಗೂ ಅವರು ಅಜ್ಞಾತವಾಗಿ, ಅಗೋಚರ ವಾಗಿ ನಾನಾ ರೀತಿಯಲ್ಲಿ ದೇಶ-ವಿದೇಶಗಳಲ್ಲಿ ತಮ್ಮ ದಿವ್ಯಲೀಲೆಯನ್ನು ನಡೆಸುತ್ತಿರುವುದನ್ನು ಕೇಳಿದಾಗ, ಕಂಡಾಗ ನಮಗೆಲ್ಲ ಆಶ್ಚರ್ಯವಾಗುತ್ತದೆ. ವೈದ್ಯಕೀಯ ಶಾಸ್ತ್ರವು ಮಾಡಲಾಗದ್ದನ್ನು ನಂಬಿಕೆ, ಶ್ರದ್ಧೆ ಹಾಗೂ ಭಗವತ್ಕೃಪೆ ಸಾಧಿಸಿತು. ಈಕೆಯ ಮಗ ಹಾಗೂ ವೃದ್ಧತಾಯಿ ಈಕೆಯ ಜೀವನದಲ್ಲಿ ಆದ ಪವಾಡವನ್ನು ಕಂಡು ಆಶ್ಚರ್ಯ ಆನಂದಗಳ ಪರಾಕಾಷ್ಠೆಯಲ್ಲಿದ್ದಾರೆ. ಭಗವಂತನ ಪವಿತ್ರನಾಮ ಹಾಗೂ ಅದರ ಶಕ್ತಿಯನ್ನು ಪುಷ್ಟೀಕರಿಸುವ ಈ ಸರಳಭಕ್ತೆಯ ಅನುಭವ ಎಲ್ಲರಿಗೂ ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರೆಯಲು ಪ್ರೋತ್ಸಾಹ ನೀಡಲಿ. ಶ್ರೀರಾಮಕೃಷ್ಣರ ಲೀಲೆ ಹೀಗೆಯೇ ಮುಂದುವರೆಯಲಿ, ಜಗತ್ತಿನ ಜನರಿಗೆ ಸನ್ಮಂಗಳವಾಗಲಿ. ✷

*(ಆಧಾರ: ಕೋಣಂಪಟ್ಟಿಯ ಶ್ರೀರಾಮಕೃಷ್ಣ ಶಾರದಾ ಆಶ್ರಮವು ನಡೆಸುತ್ತಿರುವ 'ಶ್ರೀರಾಮಕೃಷ್ಣ ಆನಂದಂ' ಎಂಬ ತಮಿಳು ಮಾಸಪತ್ರಿಕೆಯ ಜನವರಿ ೨೦೧೫ರ ಸಂಚಿಕೆ)*

**ಜನ ಹೇಳುತ್ತಾರೆ, ಹನುಮಂತನಿಗೆ ರಾಮನಾಮ ಮಹಿಮೆಯಲ್ಲಿ ಅಂಥ ವಿಶ್ವಾಸ, ಅದರ ಬಲದಿಂದ ಆತ ಸಮುದ್ರವನ್ನೇ ಲಂಘನೆ ಮಾಡಿಬಿಟ್ಟ! ಆದರೆ ಸ್ವಯಂ ರಾಮನೇ ಸೇತುವೆ ಕಟ್ಟಬೇಕಾಯಿತು.**

*'ಶ್ರೀರಾಮಕೃಷ್ಣ ಸೂಕ್ತಿ' ಯಿಂದ*



# ಕೈಲಾಸ ಮಾನಸ ಸರೋವರ ಯಾತ್ರೆ

ಸ್ವಾಮಿ ದಾಮೋದರಾನಂದ      ಭಾಗ ೩      *ಅನುವಾದ: ಡಾ.ಕೆ.ಎಲ್.ಪ್ರಸನ್ನಾಕ್ಷೀ*

## ಕೈಲಾಸದಲ್ಲಿ ಜ್ಯೋತಿದರ್ಶನ

**ಸು**ವರ್ಣವರ್ಣದ ಸೂರ್ಯನ ಬೆಳಕಿನಲ್ಲಿ ನಾನು ಗುರಿಯತ್ತ ಸಾಗಿದೆ. ಕೈಲಾಸ ಶಿಖರದ ಮೇಲೆ ಬೀಳುತ್ತಿದ್ದ ಸೂರ್ಯನ ಕಿರಣಗಳಿಂದ ಪರ್ವತ ಕೆಂಪುಮಿಶ್ರಿತ ಹೊಂಬಣ್ಣದಿಂದ ಮಿರುಗುತ್ತಿತ್ತು. ಸೂರ್ಯ ಮೇಲೆ ಮೇಲೇರುತ್ತಿದ್ದಂತೆ ಪರ್ವತದ ಬಣ್ಣವೂ ಬದಲಾಗುತ್ತಿತ್ತು. ಮೊದಲು ಹೊಂಬಣ್ಣ , ಅದರ ಮೇಲೆ ಹೊಳೆಯುವ ದಟ್ಟ ಹಳದಿಬಣ್ಣ , ಕೊನೆಗೆ ಬೆಳ್ಳಿಯ ಬಣ್ಣ ಪಡೆದು ಅತ್ಯಂತ ಸುಂದರವಾಗಿ ಪರ್ವತ ಶೋಭಿಸುತ್ತದೆ. ಸಂಪೂರ್ಣ ವಾತಾವರಣವೇ ಅದ್ಭುತವೂ ರೋಮಾಂಚಕಾರಿಯೂ ಆಗಿದ್ದು, ಆ ಸೌಂದರ್ಯವನ್ನು ಶಬ್ದಗಳಲ್ಲಿ ಸೆರೆಹಿಡಿದಿಡಲಾಗುವುದಿಲ್ಲ.

ಮೋಹಕವಾದ, ಮರುಳುಗೊಳಿಸುವ ಆ ಅದ್ಭುತ ಭಗವದ್ಭಾವ ತುಂಬಿದ ದೃಶ್ಯ ನೆನಪಾದಾಗಲೆಲ್ಲ ನನ್ನ ಮನದಲ್ಲಿ ಆ ಸುಂದರ ದರ್ಶನ ತುಂಬಿ ಬರುತ್ತದೆ. ಬೆಳಿಗ್ಗೆ ೫ ಘಂಟೆಯಿಂದ ೧೦ ಘಂಟೆಯ ವರೆಗಿನ, ಕೆಲವೇ ಘಂಟೆಗಳ ಪವಿತ್ರ , ಆನಂದಮಯ ದೃಶ್ಯವದು. ಶುದ್ಧ ನಿರ್ಮಲಾಕಾಶದಲ್ಲಿ ಬೆಳಗುವ ಜ್ಯೋತಿ ಕೆಂಪಾಗಿ, ಹಳದಿಯಾಗಿ, ಬೆಳ್ಳಿಯಾಗಿ ಬೆಳಗಿದ ಆ ಕ್ಷಣಗಳೇ ನನ್ನ ಇಡೀ ಯಾತ್ರೆಯ ಸಾರ್ಥಕ ಅವಧಿ ಎನ್ನಿಸುತ್ತದೆ. ಅರವತ್ತು ವರ್ಷಗಳ ನಂತರ, ಈಗಲೂ ಆ ಆನಂದ ನನ್ನೊಳಗೆ ತುಂಬಿದೆ. ಆಗ ಅಲ್ಲಿ ಪರ್ವತ ವಿರಲಿಲ್ಲ, ಕೇವಲ ಹೊಳೆಹೊಳೆಯುವ ಜ್ಯೋತಿಯೊಂದು ವಿಶ್ವಾಕಾಶವನ್ನು ತಬ್ಬಿ ನಿಂತಿದ್ದಂತೆ ಭಾಸವಾಗುತ್ತಿತ್ತು.

**ಅಂತರ್ಜ್ಯೋತಿರ್ಬಹಿರ್ಜ್ಯೋತಿಃಪ್ರತ್ಯಗ್ಜ್ಯೋತಿಃಪರಾತ್ಪರಃ।**
**ಜ್ಯೋತಿರ್ಜ್ಯೋತಿಃಸ್ವಯಂ ಜ್ಯೋತಿರಾತ್ಮಜ್ಯೋತಿಶ್ಶಿವೋಽಸ್ಮ್ಯಹಮ್॥**

'ಒಳಗೆ ಬೆಳಕು, ಹೊರಗೆ ಬೆಳಕು, ಅಂತರಂಗದೊಳಗೆ ಬೆಳಕು, ಬೆಳಕುಗಳನೆಲ್ಲಾ ಮೀರಿದ ಬೆಳಕು, ಬೆಳಕುಗಳಿಗೆಲ್ಲಾ ಬೆಳಕು ತುಂಬುವ ಬೆಳಕು, ತನಗೆ ತಾನೇ ಬೆಳಕು, ಆತ್ಮಜ್ಯೋತಿರೂಪಿಯಾದ ಶಿವನೇ ನಾನು.'

ಟಿಬೆಟಿಯನ್ನರೂ ಕೈಲಾಸಪರ್ವತದ ವಿಷಯದಲ್ಲಿ ಭಕ್ತಿ ಗೌರವಗಳನ್ನು ಹೊಂದಿದ್ದಾರೆ. ಆ ಪ್ರದೇಶಕ್ಕೆ ಪ್ರದಕ್ಷಿಣೆ ಬರುವಾಗ ಅವರೂ ದಂಡದಂತೆ ಬಿದ್ದು ಸಾಷ್ಟಾಂಗ ಪ್ರಣಾಮ ಮಾಡುತ್ತಾರೆ.

ಮೊದಲದಿನ ನಾನು ಕೈಲಾಸಪರ್ವತಕ್ಕೆ ಪ್ರದಕ್ಷಿಣೆ ಬರುವ ಸಾಹಸಾತ್ಮಕ ನಿರ್ಣಯ ತೆಗೆದುಕೊಂಡೆ. ಆದರೆ ಅಂದೇ ಜೋರಾಗಿ ಮಳೆ ಬರತೊಡಗಿತು. ಟಿಬೆಟಿನ ಉತ್ತರದ ಹಿಮಾಚ್ಛಾದಿತ ಪರ್ವತಗಳಿಂದ ಹೆಪ್ಪುಗಟ್ಟಿದ ನೀರು ವೇಗವಾಗಿ ಹರಿದು ಬರುತ್ತಾ ಪ್ರದಕ್ಷಿಣ ಮಾರ್ಗವನ್ನೆಲ್ಲಾ ಮುಚ್ಚಿಬಿಟ್ಟಿತು. ಜೊತೆಗೆ ಕೊರೆಯುವ ಕುಳಿಗಾಳಿ ಜೋರಾಗಿ ಬೀಸತೊಡಗಿತು. ಸಂಜೆ ಐದು ಘಂಟೆಯ ವೇಳೆಗೆ ದಟ್ಟವಾದ ಕಪ್ಪುಮೋಡಗಳು ಆಕಾಶವನ್ನು ಮುಚ್ಚಿಬಿಟ್ಟವು. ನಡೆಯುವ ದಾರಿಯಲ್ಲೇ ನೀರಿನ ಮಟ್ಟ ಸೊಂಟದವರೆಗೆ ಏರಿತು. ನೀರಿನ ಹರಿಯುವ ವೇಗವೂ ಕ್ಷಣಕ್ಷಣಕ್ಕೂ ಹೆಚ್ಚಾಗುತ್ತಿದ್ದುದರಿಂದ ಮುಂದೆ ಸಾಗುವಂತಿರಲಿಲ್ಲ. ಅದು ಆಲಿಕಲ್ಲಿನ ಮಳೆಯಾಗಿತ್ತು. ದೊಡ್ಡದೊಡ್ಡ ಆಲಿಕಲ್ಲುಗಳು ನನ್ನ ಛತ್ರಿಯ ಮೇಲೆ ಬೀಳುತ್ತಿದ್ದವು. ಅತ್ಯಂತ ಕೊರೆಯುವ ಚಳಿಗಾಳಿ, ನೀರು ಮತ್ತು ಆಲಿಕಲ್ಲುಗಳ ಹೊಡೆತಗಳಿಂದ ನನ್ನ ಮೈ ಹೆಚ್ಚುಕಡಿಮೆ ಹೆಪ್ಪುಗಟ್ಟಿದಂತೆಯೇ ಆಗಿ ಹೋಗಿತ್ತು. ನನ್ನ ಎದೆಯ ಭಾಗದಲ್ಲಿ ಮಾತ್ರ ಸ್ವಲ್ಪ ಕಾವಿತ್ತು. ನಾನು ಒಂದೇ ಸಮನೆ 'ಓಂ ನಮಃ ಶಿವಾಯ ಶ್ರೀ ಮಾ ರಾಮಕೃಷ್ಣಾಯ ನಮಃ' ಎಂದು ಜಪಿಸುತ್ತಿದ್ದೆ. ನನ್ನ ಶರೀರ ಮೃತವಾಗಿ ಬಿದ್ದು

ಹೋಗುವುದಾದರೂ ನನ್ನ ತುಟಿಯ ಮೇಲೆ ಈ ಮಂತ್ರವಿರಬೇಕೆಂಬುದಷ್ಟೇ ನನ್ನ ಧ್ಯೇಯವಾಗಿತ್ತು.

ಇಂತಹ ಕಠಿಣ ಪರಿಸ್ಥಿತಿಯಲ್ಲಿ ಒಬ್ಬ ಸಾಧು ತನ್ನ ಲಗೇಜನ್ನು ಹೊರಲಾರದೆ ಕಷ್ಟಪಡುತ್ತಾ ಬರುತ್ತಿದ್ದುದನ್ನು ಕಂಡೆ. ಆತನ ಕೆಲವು ವಸ್ತುಗಳು ನೀರಿನಲ್ಲಿ ಹರಿದು ಹೋಗುತ್ತಿರುವುದನ್ನು ಕಂಡೆ. ಸ್ವಲ್ಪ ಹೊತ್ತಿನಲ್ಲಿ ಆ ಸಾಧುವೂ ಕಾಣಲಿಲ್ಲ, ವೇಗದಿಂದ ಹರಿಯುತ್ತಿದ್ದ ನೀರಿನ ತೊರೆ ಆತನನ್ನೂ ಸೆಳೆದೊಯ್ದಿರಬೇಕು, ಆತನನ್ನು ಶಿವನಿಗೆ ಸಮರ್ಪಣೆ ಮಾಡಿರಬೇಕು. ಕಳೆದ ಶತಮಾನಗಳಲ್ಲಿ ಇಂತಹ ಅಹಿತಕರ ಘಟನೆಗಳು ಎಷ್ಟು ನಡೆದಿವೆಯೊ! ಎಷ್ಟು ಶ್ರದ್ಧಾವಂತ ಯಾತ್ರಿಕರು ಈ ರೀತಿಯ ಪ್ರಕೃತಿವಿಕೋಪಕ್ಕೆ ತುತ್ತಾಗಿದ್ದಾರೊ! ಇಂತಹ ಕಠಿಣ ಪರಿಸ್ಥಿತಿಯಲ್ಲೂ ನಾನು ಜೀವಂತ ಉಳಿದಿದ್ದೇನೆಂದರೆ ಅದು ಕೇವಲ ಭಗವಂತನ ಕೃಪೆಯಷ್ಟೆ! ವೇಗದಿಂದ ಹರಿಯುತ್ತಿರುವ ಕೊರೆಯುವ ಹಿಮಶೀತಲ ನೀರು, ತಣ್ಣನೆ ಬೀಸುತ್ತಿರುವ ಗಾಳಿ, ಅಲ್ಪ ಸ್ವಲ್ಪ ಇದ್ದ ನನ್ನ ಲಗೇಜು, ಇವುಗಳ ಕಾರಣ ನನ್ನ ಪಾದಗಳು ಮರಗಟ್ಟಿ ದೃಢತೆ ಕಳೆದುಕೊಂಡವು, ನಾನು ನಿಲ್ಲಲಾರದೆ ತೂರಾಡತೊಡಗಿದೆ. ಭೂಮಿಯ ಮೇಲಿನ ನನ್ನ ಜೀವಿತವು ಈ ಪವಿತ್ರಕ್ಷೇತ್ರದಲ್ಲಿ ಅಂತ್ಯವಾಗುವ ಘಟ್ಟ ಮುಟ್ಟಿತು. ನನ್ನ ಉಸಿರು ನಿಲ್ಲುವುದಾದರೆ ಅದು ದೇವರ ನಾಮದಿಂದಲೇ ನಿಲ್ಲಲಿ, ಎಂದು ನಾನು ನಿರಂತರ ಭಗವನ್ನಾಮವನ್ನು ಜಪಿಸುತ್ತಲೇ ಇದ್ದೆ. ರಾತ್ರಿ ಕಳೆಯಲು ಯಾವುದಾದರೂ ನೆಲೆ ಬೇಕಲ್ಲ! ಮೆಲ್ಲಮೆಲ್ಲನೆ ಹೆಜ್ಜೆ ಸರಿಸತೊಡಗಿದೆ.

ಸುಮಾರು ೬.೩೦ರ ವೇಳೆಗೆ ಆಲಿಕಲ್ಲು ಮಳೆಯ ರಭಸ ಜೋರಾಯಿತು. ಆಲಿಕಲ್ಲುಗಳ ಹೊಡೆತಕ್ಕೆ ನನ್ನ ಛತ್ರಿ ಹರಿದು ಹೋಗುವುದೆಂದು ತಿಳಿದೆ. ಆ ಆಲಿಕಲ್ಲುಗಳು ಸುಮಾರು ನೆಲ್ಲಿಕಾಯಿ ಗಾತ್ರದಷ್ಟಿದ್ದು ರಪರಪನೆ ಆಕಾಶದಿಂದ ಬೀಳುತ್ತಿದ್ದವು. ಪುಣ್ಯವಶಾತ್ ಏನೂ ತೊಂದರೆ ಆಗಲಿಲ್ಲ. ಎರಡು ಘಂಟೆಗಳ ನಿರಂತರ ಮಳೆಯ ಹೊಡೆತದ ನಂತರ ಮಳೆಯ ರಭಸ ಕಡಿಮೆಯಾಗಿ ಕೊನೆಗೆ ನಿಂತಿತು.

ಸುಮಾರು ಏಳು ಘಂಟೆಯ ವೇಳೆಗೆ ನಾನು ಸಾಗುತ್ತಿದ್ದ ದಾರಿಯಲ್ಲಿ, ನನ್ನ ಅದೃಷ್ಟದಿಂದ, ಬೌದ್ಧಮಠವೊಂದು ಕಂಡು ಬಂದಿತು. ಅಲ್ಲಿ ಆ ರಾತ್ರಿ ಆಸರೆ, ಆಹಾರ ಸಿಗಬಹುದೆಂಬ ನಿರೀಕ್ಷೆಯಿಂದ ಆ ಕಡೆಗೆ ಸಾಗಿದೆ. ಬೌದ್ಧ ಮಠದ ಮಂದ ಬೆಳಕಿನಲ್ಲಿ ನನ್ನ ಕಾಲುಗಳೆಲ್ಲ ಬಿಳಿಚಿಕೊಂಡಿದ್ದನ್ನು ಕಂಡೆ. ನನ್ನ ಕಾಲಿನ ಚರ್ಮದ ಮೇಲ್ಪದರ ಸ್ಪರ್ಶಜ್ಞಾನವನ್ನೇ ಕಳೆದುಕೊಂಡಂತಿತ್ತು. ಮರುದಿನ ಚರ್ಮದ ಮೇಲ್ಪದರ ಸಿಪ್ಪೆ ಒಡೆದು ಉದುರಿಹೋಯಿತು. ನನ್ನ ಬಳಿ ಒಂದು ಜೊತೆ ಕ್ಯಾನ್ವಾಸ್ ಬೂಟುಗಳು ಮಾತ್ರ ಇದ್ದವು.

ಆ ಮಠದಲ್ಲಿ ಒಂದು ವಿಶಾಲವಾದ ಹಾಲ್ ಇದ್ದಿತೇ ಹೊರತು ಪ್ರತ್ಯೇಕ ಕೊಠಡಿಗಳು ಇರಲಿಲ್ಲ. ಗೋಡೆಯಲ್ಲಿದ್ದ ಸಣ್ಣ ಸಣ್ಣ ತೂತುಗಳೇ ಕಿಟಕಿಗಳು. ಆ ಹಾಲ್‌ನ ಮಧ್ಯದಲ್ಲಿ ದೊಡ್ಡದಾಗಿ ಬೆಂಕಿ ಉರಿಯುತ್ತಿತ್ತು. ಮೂರು ಕಾಲಿನ ನಿಲುವಿನ ಮೇಲಿದ್ದ ಒಂದು ದೊಡ್ಡ ಕೆಟಲಿನಲ್ಲಿ ಉಪ್ಪು ಚಹಾ ಕುದಿಯುತ್ತಿತ್ತು. ಅದು ಆ ಮಠದ ನಿವಾಸಿಗಳಿಗೆ ಹಾಗೂ ಆಗಂತುಕರಿಗೆ. ನಿರಂತರ ಬೆಂಕಿ ಉರಿಯುತ್ತಿದ್ದ ಕಾರಣ ಮಠದ ಮೇಲ್ಛಾವಣಿಯ ತುಂಬ ಕಪ್ಪು ಮಸಿ ತುಂಬಿಕೊಂಡಿತ್ತು. ಅದು ಆಗಾಗ ಕಪ್ಪು ಅಂಟು ಉಂಡೆಗಳಾಗಿ ಅಲ್ಲಿನ ನಿವಾಸಿಗಳ ಹೊದಿಕೆ ಬಟ್ಟೆಗಳ ಮೇಲೆ ಉದುರುತ್ತಿತ್ತು. ಸ್ಥಳೀಯರಿಗೆ ಅದೇನೂ ಬಾಧಿಸುತ್ತಿರಲಿಲ್ಲ. ಬಟ್ಟೆಯ ಮೇಲೆ ಬಿದ್ದ ಮಸಿಯನ್ನು ತೆಗೆದುಹಾಕಲು ಮುಟ್ಟಿದರೆ, ಅದು ಕೈಗೇ ಅಂಟಿಕೊಳ್ಳುತ್ತಿತ್ತು.

ಅಲ್ಲಿದ್ದ ಲಾಮಾಗಳು ಭಾರತೀಯ ಸಂನ್ಯಾಸಿಯೊಬ್ಬನು ಈ ಅವೇಳೆಯಲ್ಲಿ ಬಂದುದ್ದನ್ನು ಕಂಡು ಸಂತೋಷದಿಂದ ಸ್ವಾಗತಿಸಿದರು. ಆಗ ಅವರ ಸಂಜೆಯ ಪ್ರಾರ್ಥನೆ ಸಾಗುತ್ತಿತ್ತು. ಅವರು ಕೊಟ್ಟ ಕಾಟೇಜ್ ಚೀಸ್ ಮತ್ತು ನನ್ನೊಡನೆ ನಾನು ತಂದಿದ್ದ ಚಟ್ಟುಪುಡಿ ಉಪ್ಪು ನೀರಿನೊಡನೆ ನನ್ನ ರಾತ್ರಿಯ ಊಟ ಮುಗಿಸಿದೆ. ಆ ಮಠದಲ್ಲಿ ಕಾಷಾಯ ಧರಿಸಿದ್ದ ೫-೧೦ ವಯಸ್ಸಿನ ಸಣ್ಣಪುಟ್ಟ ಹುಡುಗರೂ ಅತ್ಯಂತ ವಯಸ್ಸಾದ ಸಾಧುಗಳೂ ಇದ್ದರು. ಯುವ ಸಾಧುಗಳಿಗಿಂತ ಸಣ್ಣವಯಸ್ಸಿನ ಮಕ್ಕಳೇ ಹೆಚ್ಚಾಗಿದ್ದರು. ವಿಚಾರಣೆ ಮಾಡಲಾಗಿ ಟಿಬೆಟ್‌ನಲ್ಲಿ ಹೆಣ್ಣುಮಕ್ಕಳಿಗಿಂತ ಗಂಡು ಮಕ್ಕಳ ಸಂಖ್ಯೆ ಹೆಚ್ಚು ಎಂದು ತಿಳಿಯಿತು. ಕುಟುಂಬದ ಮೊದಲ ಒಂದಿಬ್ಬರು ಮಕ್ಕಳು ವಿವಾಹಿತರಾಗಿ ಕುಲ ಮುಂದುವರೆಸುತ್ತಾರೆ. ಉಳಿದ ಸಣ್ಣ ಮಕ್ಕಳನ್ನು ಮಠಗಳಿಗೆ ಸೇರಿಸುತ್ತಾರೆ. ಹೆಣ್ಣುಮಕ್ಕಳ ಸಂಖ್ಯೆ ಕಡಿಮೆ ಇರುವುದೇ ಈ ಸಮಾಜದಲ್ಲಿ ಬಹುಪತೀತ್ವಕ್ಕೆ ಕಾರಣವಿರಬಹುದು.

ಇಡೀದಿನದ ನಡಿಗೆ, ವಿಶೇಷವಾಗಿ, ಆ ಮಳೆ ಕೊರೆಯುವ ಚಳಿಗಾಳಿ ಹಿಮದ ನೀರಿನಲ್ಲಿ ಎರಡು ಘಂಟೆಗಳ ನಡಿಗೆ, ಬಹಳ ಆಯಾಸವನ್ನುಂಟುಮಾಡಿತ್ತು. ಊಟ ಮಾಡುತ್ತಿದ್ದಂತೆ ಬೆಚ್ಚಗಿನ ಕಂಬಳಿ ಹೊದೆದು ಕೊರಡಿನಂತೆ ಮಲಗಿಬಿಟ್ಟೆ. ಕೈಲಾಸದ ಸುತ್ತ ಮುತ್ತಲಿನಲ್ಲಿ ಇದ್ದ ಈ ಮಠದ ಆಸರೆ ನನಗೆ ದೈವವಶಾತ್ ದೊರಕಿತು. ಇದು ಒಂದು ದೊರಕದೆ ಇದ್ದಿದ್ದರೆ ಉಂಟಾಗುತ್ತಿದ್ದ ಪರಿಣಾಮವನ್ನು ನೀವಾಗಲೀ ನಾನಾಗಲೀ ಊಹಿಸಲಾರೆವು.

ಬೆಳಿಗ್ಗೆ ಬೇಗನೆ ಹೊಸಹುರುಪಿನೊಡನೆ ಎದ್ದೆ. ಉಪ್ಪು ಚಹಾ ಕಾಟೇಜ್ ಚೀಸ್ ಯಾಕ್‌ನ ಬೆಣ್ಣೆ ಇವುಗಳನ್ನು ಉಪಾಹಾರವಾಗಿ ಸೇವಿಸಿ ಬೆಳಗುತ್ತಿರುವ ಸೂರ್ಯಪ್ರಕಾಶದಲ್ಲಿ ಕೈಲಾಸ ಪರಿಕ್ರಮಕ್ಕೆ ಹೊರಟೆ. ಎರಡನೇ ದಿನ ಮಧ್ಯಾಹ್ನದ ವೇಳೆಗೆ ಕೈಲಾಸ ಪರಿಕ್ರಮದ ಮುಕ್ಕಾಲು ಭಾಗ ಮುಗಿಸಿದ್ದೆ. ಪರ್ವತದ ಪೂರ್ವಕ್ಕಿದ್ದ ಗೌರೀ ಕುಂಡವನ್ನು ತಲುಪಿದೆ. ಗೌರೀಕುಂಡದ ನೀರಿನಿಂದ ಪ್ರೋಕ್ಷಿಸಿಕೊಂಡೆ.

## ಮರುಪ್ರಯಾಣ

ಭಾರತಕ್ಕೆ ಹಿಂತಿರುಗಿ ಪ್ರಯಾಣಮಾಡುವಾಗ ಭಾರತೀಯ ವ್ಯಾಪಾರಿಗಳು ನನ್ನ ಸಹ ಪ್ರಯಾಣಿಕರಾಗಿದ್ದರು. ಭಾರತದ ಸರಹದ್ದನ್ನು

ತಲುಪಲು ಇದ್ದ ಅತಿ ಸಮೀಪದ ಕಣಿವೆ 'ಹೋತಿ' ಕಣಿವೆ. ಇದು ಸಮುದ್ರ ಮಟ್ಟದಿಂದ ೧೯,೦೦೦ ಅಡಿ ಎತ್ತರದಲ್ಲಿದ್ದು ಅತ್ಯಂತ ಕಡಿದಾಗಿದೆ. ಈ ದಾರಿಯಲ್ಲಿ ಕೆಲವು ಕಿಲೋಮೀಟರ್‌ಗಳಷ್ಟು ಪರ್ವತ ದಾರಿ ಸಾಗಲೂ ಅತ್ಯಂತ ಎದೆಗಾರಿಕೆ ಬೇಕು. ವ್ಯಾಪಾರಿಗಳಿಗೆ ಬೇರೆ ಕೆಲಸಗಳಿದ್ದುದರಿಂದ ಈ ಜಾಗದಲ್ಲಿ ನನ್ನನ್ನು ಬಿಟ್ಟು ಅವರು ಹೊರಟುಹೋದರು. ಆ ಕೊರೆಯುವ ಚಳಿಯಲ್ಲಿ ನಾನು ಚಿರಂತನ ನಿದ್ರೆಗೆ ಜಾರುವ ಎಲ್ಲಾ ಸಾಧ್ಯತೆಗಳೂ ಇರುವುದರಿಂದ ನಿರಂತರ ಸಾಗುತ್ತಲೇ ಇರಬೇಕೆಂದೂ, ಎಷ್ಟೇ ಆಯಾಸವಾದರೂ ಎಲ್ಲೂ ನಿಲ್ಲಬಾರದೆಂದೂ, ಅವರು ನನಗೆ ಸಲಹೆ ಕೊಟ್ಟಿದ್ದರು.

ಪರ್ವತದ ತುದಿಯಲ್ಲಿ ದೊಡ್ಡ ದೊಡ್ಡ ರಣಹದ್ದುಗಳು ಕುಳಿತಿದ್ದವು. ಅವು ನನ್ನತ್ತಲೇ ನೋಡುತ್ತಿದ್ದವು. ಸುರಿಯುವ ಹಿಮಪಾತದ ಕಾರಣ ಕೆಲವೊಮ್ಮೆ ವ್ಯಾಪಾರಿಗಳಿಗೆ, ತಮ್ಮ ಪ್ರಾಣಿಗಳೊಡನೆ ಪ್ರಯಾಣ ಮುಂದುವರೆಸಲಾಗುತ್ತಿರಲಿಲ್ಲ. ಕೆಲವೊಮ್ಮೆ ಅವರು ಮರಗಟ್ಟಿ ಹಾಗೇ ಕೊನೆಯುಸಿರೆಳೆಯುವ ಸಂದರ್ಭಗಳೂ ಇರುತ್ತಿದ್ದವು. ಈ ರಣಹದ್ದುಗಳಿಗೆ ಆ ಶವಗಳೇ ಆಹಾರ. ಮಾನವರ ಕೂದಲುಗಳು, ಅಲ್ಲಲ್ಲಿ ಚೆದುರಿ ಬಿದ್ದಿರುವ ಅಸ್ಥಿಪಂಜರಗಳು, ಸಣ್ಣ ಸಣ್ಣ ಪ್ರಾಣಿಗಳು, ಈ ಎಲ್ಲವನ್ನೂ ನಾನು ಕಂಡೆ. ಗುರುಮಹಾರಾಜರ ಕೃಪೆಯಿಂದ, ಆಕಾಶ ಪ್ರಕಾಶಮಾನವಾಗಿತ್ತು. ನಾನು ಈ ಅಪಾಯಕಾರಿ ಪರಿಸ್ಥಿತಿಯನ್ನು ಕ್ಷೇಮವಾಗಿ ದಾಟಲು ಸಾಧ್ಯವಾಯಿತು. ಅಲ್ಲಿಂದ ಭಾರತದ ಕಡೆಗೆ ಇಳಿಯತೊಡಗಿದೆ.

ಇಲ್ಲಿ ನನಗೊಂದು ಪರೀಕ್ಷೆ ಎದುರಾಯಿತು. ಸ್ವಲ್ಪ ದೂರದಲ್ಲಿ ಟಿಬೆಟ್ ದೇಶದ ಗನ್ ಹಿಡಿದ ವ್ಯಕ್ತಿಯೊಬ್ಬನು ಭಾರತೀಯ ಯಾತ್ರಿಕರನ್ನು ದರೋಡೆ ಮಾಡುವ ಸಲುವಾಗಿ ಕಾಯುತ್ತಿದ್ದನು. ಮೊದಲನೆಯದಾಗಿ, ನನ್ನ ಬಳಿ ಬೆಲೆಬಾಳುವ ಪದಾರ್ಥಗಳೇನೂ ಇರಲಿಲ್ಲ, ಎರಡನೆಯದು ನಾನು ಸಂನ್ಯಾಸಿಯಾಗಿದ್ದೆ. ಆತ ನನ್ನನ್ನು ಸಾಗಿಹೋಗಲು ಬಿಟ್ಟ. ನಿಧಾನವಾಗಿ ಧೈರ್ಯದಿಂದ ಮುನ್ನಡೆಯುತ್ತಿದ್ದಾಗ ಅಲ್ಲಿ ಅವನ ಬಿಡಾರವನ್ನೂ, ಚಹಾವನ್ನು ಕೊಡುತ್ತಿದ್ದ ಸ್ತ್ರೀಯೊಬ್ಬಳನ್ನೂ ನೋಡಿದೆ. ಬಿಸಿ ಚಹಾವನ್ನು ಕುಡಿದು ನನ್ನ ಪ್ರಯಾಣ ಮುಂದುವರೆಸಿದೆ. ೧೦-೧೫ ಕಿಲೋಮೀಟರ್ ದೂರ ಮಿತಿಯಲ್ಲಿರುತ್ತಿದ್ದ ಛತ್ತಿಗಳಲ್ಲಿ ವಿಶ್ರಾಂತಿ ಪಡೆಯುತ್ತಿದ್ದೆ. ಆ ಛತ್ತಿಗಳಲ್ಲಿ ಹೇನುಗಳ ಕಾಟ ವಿಪರೀತ ಇತ್ತು. ಅವು ನನ್ನ ಬಟ್ಟೆಗಳಿಗೂ ಹತ್ತಿಕೊಂಡವು.

ಹೀಗೇ ಒಂದು ವಾರ ಕಾಲ ನಡೆಯುತ್ತಾ ನಡೆಯುತ್ತಾ ನಾನು ಬದರೀನಾಥಕ್ಕೆ ಬಂದು ತಲುಪಿದೆ. ಇಲ್ಲಿ ತಪ್ತಕುಂಡದಲ್ಲಿ ಹಾಯಾಗಿ ಸ್ನಾನ ಮಾಡಿದೆ. ಚಳಿಯ ಕಾರಣ ಎಷ್ಟೋ ವಾರಗಳ ಕಾಲ ನಾನು ಸ್ನಾನವನ್ನೇ ಮಾಡಿರಲಿಲ್ಲ. ಬಿಸಿ ಸ್ನಾನದಿಂದ ನನ್ನ ಮೈ ಬಟ್ಟೆಗಳಿಗೆ ಹತ್ತಿಕೊಂಡಿದ್ದ ಹೇನುಗಳೆಲ್ಲಾ ಉದುರಿಹೋದವು. ನನ್ನ ಬಟ್ಟೆಗಳನ್ನೂ ಹೊದಿಕೆಗಳನ್ನೂ ತೊಳೆದು ಶುಚಿಮಾಡಿಕೊಂಡೆ. ೧೯೫೭ರ ಅಕ್ಟೋಬರ್ ತಿಂಗಳವರೆಗೆ ಇಲ್ಲೇ ಇದ್ದು ಒಂದು ಕುಟೀರದಲ್ಲಿ ವಾಸಿಸುತ್ತಾ ತಪಸ್ಸು ಮಾಡಿದೆ. ಚಳಿಗಾಲ ಸಮೀಪಿಸತೊಡಗಿತು ಸರಿಯಾದ ಭದ್ರವಾದ ನೆಲೆ, ಆಹಾರ ವ್ಯವಸ್ಥೆ ಇಲ್ಲದಿದ್ದ ಕಾರಣ ನಾನು ಪರ್ವತ ಇಳಿದು ಸಾಗಿ ಹೋಗುವ ನಿರ್ಣಯ ಕೈಗೊಂಡೆ. ಋಷೀಕೇಶಕ್ಕೆ ಬಂದು, ಅಲ್ಲಿಂದ ಹರಿದ್ವಾರವನ್ನು ತಲುಪಿ ನನ್ನ ಯಾತ್ರೆಯನ್ನು ಪೂರ್ಣಗೊಳಿಸಿದೆ.

ಈ ಎಲ್ಲಾ ಅನುಭವಗಳೂ ೬೦ ವರ್ಷಗಳ ಹಿಂದೆ ಆದುವು. ಆದರೂ ಇಂದಿಗೂ ಅವು ನನ್ನ ಮನದಲ್ಲಿ ಹಚ್ಚಹಸಿರಾಗಿದ್ದು ಸ್ಪಷ್ಟವಾಗಿದ್ದು ಸ್ಫೂರ್ತಿದಾಯಕವಾಗಿವೆ. ಈಗ ನಿಮ್ಮೊಡನೆ ಹಂಚಿಕೊಂಡಿರುವ ಈ ನನ್ನ ಯಾತ್ರೆ ನನ್ನ ಅಂತರಂಗ ಬಹಿರಂಗಗಳಲ್ಲಿ ಶ್ರೇಯಃಕಾರಕ ಪ್ರಚಂಡ ಬದಲಾವಣೆಯನ್ನು ತಂದಿದೆ.

*(ಮುಗಿಯಿತು)*

## ಮಾತೆಯ ಮಡಿಲು



ಸುಮಾರು ಒಂಬತ್ತು-ಹತ್ತು ವರ್ಷದ ಹುಡುಗ ಗೋವಿಂದ ಎನ್ನುವವನು ಜಯರಾಮಬಾಟಿಯಲ್ಲಿ ಶ್ರೀಮಾತೆಯವರ ಮನೆಯ ದನಕರುಗಳನ್ನು ನೋಡಿಕೊಳ್ಳುತ್ತಿದ್ದ. ಒಂದು ಸಲ ಅವನಿಗೆ ಮೈಕೈಯಲ್ಲಿ ವಿಪರೀತ ತುರಿಕೆ, ಉರಿ ಕಾಣಿಸಿಕೊಂಡಿತು. ರಾತ್ರಿ ಹೊತ್ತು ನೋವು ತಡೆಯಲಾರದೆ ಅವನು ಜೋರಾಗಿ ಅಳತೊಡಗಿದ. ಅವನ ಅಳುವನ್ನು ಕೇಳಿಸಿಕೊಂಡ ಶ್ರೀಮಾತೆಗೆ ರಾತ್ರಿಯೆಲ್ಲ ನಿದ್ದೆ ಬರಲಿಲ್ಲ. ಮರುದಿನ ಬೆಳಿಗ್ಗೆ ಅವರು ಗೋವಿಂದನನ್ನು ತಮ್ಮ ಕೋಣೆಗೆ ಕರೆದೊಯ್ದು, ತಾವೇ ಬೇವಿನಸೊಪ್ಪು, ಅರಶಿನದ ಲೇಪ ತಯಾರಿಸಿ, ಅದನ್ನು ಹೇಗೆ ಹಚ್ಚಿಕೊಳ್ಳಬೇಕು ಎಂದು ತೋರಿಸಿಕೊಟ್ಟರು. ಅವರು ಹೇಳಿ ಕೊಟ್ಟಂತೆ ಗೋವಿಂದ ಆ ಲೇಪವನ್ನು ಹಚ್ಚಿಕೊಳ್ಳುತ್ತಿದ್ದ. ಶ್ರೀಮಾತೆಯವರ ಪ್ರೀತಿ, ವಾತ್ಸಲ್ಯಗಳಿಂದ ಅವನ ಮನಸ್ಸು ಒಂದು ರೀತಿಯ ಅವರ್ಣನೀಯ ಆನಂದದಿಂದ ಪ್ರಫುಲ್ಲವಾಯಿತು. ಅವರಿಬ್ಬರ ಮುಖವನ್ನು ನೋಡಿ, ಅವರ ಮಾತುಕತೆಗಳನ್ನು ಕೇಳಿ ಗೋವಿಂದ ಶ್ರೀಮಾತೆಯವರ ಮಗನಲ್ಲವೆಂದು ಯಾರು ತಾನೇ ಹೇಳಿಯಾರು? ಶ್ರೀಮಾತೆಯವರ ಮನೆಗೆ ಕೆಲಸದ ಆಳುಗಳು ಬರಲಿ, ಗಾಡಿ ಹೊಡೆಯುವವರು ಬರಲಿ, ಪಲ್ಲಕ್ಕಿ ಹೊರುವವರು ಬರಲಿ, ಅಂಬಿಗರು ಅಥವಾ ಮೀನುಗಾರ-ಮೀನುಗಾರ್ತಿಯರು ಬರಲಿ ಅವರೆಲ್ಲರೂ ಶ್ರೀಮಾತೆಯವರ ಮಕ್ಕಳೇ ಆಗಿರುತ್ತಿದ್ದರು. ಅವರೆಲ್ಲರೂ ಭಕ್ತರಂತೆಯೇ ಶ್ರೀಮಾತೆಯವರ ಸ್ನೇಹ, ಪ್ರೀತಿಗಳಿಗೆ ಪಾತ್ರರಾಗುತ್ತಿದ್ದರು.

*(ಶ್ರೀಮಾತೆಯವರ ನೇರ ಶಿಷ್ಯ ಸ್ವಾಮಿ ಶಾರದೇಶಾನಂದರ ಸ್ಮೃತಿಚಿತ್ರದಿಂದ)*

# ವಿಶ್ವವ್ಯಾಪೀ ವಿವೇಕಾನಂದರು

ಸಿ. ಎಸ್.ಶಾಸ್ತ್ರೀ

ಸ್ವಾಮಿ ವಿವೇಕಾನಂದರ ಜೀವನ ಹಾಗೂ ವಿಚಾರಧಾರೆ ಇವು ಎಲ್ಲ ಮಿತಿಗಳನ್ನು ಮೀರಿ ನಿಂತು, ವಿಶ್ವವ್ಯಾಪಿಯಾದ ಧ್ಯೇಯ, ಧೋರಣೆಗಳನ್ನು ಎಲ್ಲೆಡೆ ಪಸರಿಸುತ್ತಿರುವುದನ್ನು ಇಂದು ನಾವು ಕಾಣುತ್ತಿದ್ದೇವೆ. ಈ ವಿಷಯವನ್ನು ಕುರಿತು ಬರೆದಿರುವ ಲೇಖಕರು ನಿವೃತ್ತ ಇತಿಹಾಸ ಪ್ರಾಧ್ಯಾಪಕರು. ಅವರು ದಿವ್ಯತ್ರಯರನ್ನು ಕುರಿತು ಅನೇಕ ಲೇಖನಗಳನ್ನು ಬರೆದು ವಿವಿಧ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ.

ಮಹಾಪುರುಷರು ಯಾವುದೇ ದೇಶ-ಕಾಲ-ಜನಾಂಗಕ್ಕೆ ಸೀಮಿತವಾಗಿಲ್ಲ ಎಂಬುದು ಸ್ವಾಮಿ ವಿವೇಕಾನಂದರ (೧೮೬೩-೧೯೦೨) ವ್ಯಕ್ತಿತ್ವದಿಂದ ತಿಳಿದು ಬರುತ್ತದೆ. ಮಹಾವೀರ, ಬುದ್ಧ, ಏಸು ಮೊದಲಾದವರು ದೇಶ-ಕಾಲಗಳ ಪರಿಧಿಯನ್ನು ಮೀರಿ ಜಗತ್ತಿಗೇ ಬೋಧಕರಾಗಿದ್ದಂತೆ, ಸ್ವಾಮಿ ವಿವೇಕಾನಂದರು ಆಧುನಿಕ ಯುಗದಲ್ಲಿ ಜಗತ್ತಿಗೇ ಮಾರ್ಗದರ್ಶಕರಾದರು.

### ಆತ್ಮೋದ್ಧಾರದ ವಿಶಾಲ ಕಲ್ಪನೆ

ಸನಾತನ ಧರ್ಮದ ಅಂತಿಮ ಗುರಿಯೇ ಮೋಕ್ಷಸಾಧನೆ. ಅದು ಜನನ ಮರಣಗಳ ಸಂಸಾರ ಬಂಧನದಿಂದ ಬಿಡುಗಡೆ ಮಾಡಿ ಮುಮುಕ್ಷುತ್ವ ನೀಡುವುದಾಗಿದೆ. ಅದಕ್ಕಾಗಿ ಸಾಧಕರು ವಿವಿಧ ಮಾರ್ಗಗಳನ್ನು ಅನುಸರಿಸುತ್ತಾರೆ. ಆದರೆ, ಅವೆಲ್ಲಾ ಕೇವಲ ವೈಯಕ್ತಿಕ ಆತ್ಮೋದ್ಧಾರಕ್ಕಾಗಿ ಮಾಡುವ ಸಾಧನೆಗಳು. ಈ ರೀತಿಯ ವ್ಯಕ್ತಿ ಕೇಂದ್ರೀಕೃತ ಆತ್ಮೋದ್ಧಾರಕ್ಕಿಂತ ತೀರಾ ಭಿನ್ನವಾದುದು ವಿವೇಕಾನಂದರ ಕಲ್ಪನೆ. ಆತ್ಮೋದ್ಧಾರದ ವಿಶಾಲ ಕಲ್ಪನೆ ಅವರದಾಗಿತ್ತು. ಅದು ಓರ್ವವ್ಯಕ್ತಿಗೆ ಮಾತ್ರ ಸಂಬಂಧಿಸಿದ್ದಲ್ಲ. ಇಡೀ ಮನುಕುಲದ ಮೋಕ್ಷಕ್ಕಾಗಿ ಅವರ ಸಾಧನೆಯಾಗಿತ್ತು! ''ವಿಶ್ವದ ಜನರ ದುಃಖವನ್ನು ಬಗೆಹರಿಸುವ ಸಲುವಾಗಿ ನಾನು ಸಾವಿರಾರು ಜನ್ಮಗಳನ್ನು ತಳೆಯಲೂ ಸಿದ್ಧನಿದ್ದೇನೆ ಮತ್ತು ಎಲ್ಲರನ್ನೂ ನನ್ನೊಂದಿಗೆ ಮೋಕ್ಷದತ್ತ ಕೊಂಡೊಯ್ಯುವೆನು'' - ಎಂಬುದು ಅವರ ನಿಲುವಾಗಿತ್ತು. *(Complete Works of Swami Vivekananda, Vol.6)* ಅವರು ಕಂಡುಕೊಂಡ ಸತ್ಯ, ಸರ್ವಜನ ಹಿತವಾದ ಸಾರ್ವತ್ರಿಕ ಆತ್ಮೋದ್ಧಾರ. ವ್ಯಕ್ತಿಗತವಾದ ಸ್ವರ್ಗಕ್ಕಿಂತ ಜನಹಿತವಾದ ನರಕವೇ ಮೇಲು ಎಂಬ ಭಾವನೆ ಅವರದಾಗಿತ್ತು. ಈ ವಿಶಾಲ ಕಲ್ಪನೆ ಅವರ ವಿಶ್ವವ್ಯಾಪಕತ್ವಕ್ಕೆ ಕೈಗನ್ನಡಿ. ಸ್ವಾರ್ಥದ ಲವಲೇಶವೂ ಇಲ್ಲದ ಅವರ ಈ ಸಾಧನೆಯ ಗುರಿ ವಿಶ್ವದಾದ್ಯಂತ ಇರುವ ಜನರ ಸೇವೆಯಾಗಿತ್ತು.

### ಹೃದಯ ಶ್ರೀಮಂತಿಕೆ

ವಿವೇಕಾನಂದರು ವಿಶ್ವಮಾನವತಾವಾದದ ಬಲವಾದ ಪ್ರತಿಪಾದಕರಾಗಿದ್ದರು. ಮಾನವನ ಕೃತಕ ವಿಂಗಡನೆಗಳಾದ, ಜಾತಿ-ಮತ-ದೇಶಗಳ ಅಡೆ-ತಡೆಗಳನ್ನು ಮೀರಿ, ಮನುಕುಲದ ಏಕತೆಯನ್ನು ಸಾರುವ ಈಶ್ವರೀಯ ಜಗತ್ತನ್ನು ಅವರು ಕಂಡಿದ್ದರು. ತನ್ನಲ್ಲಿ ಇತರರನ್ನು ಗುರುತಿಸುವ, ಮತ್ತು ಇತರರಲ್ಲಿ ತನ್ನನ್ನು ಕಾಣುವ ಮೂಲಭಾವನೆಯು ಜನರೊಳಗಿನ ಬಾಹ್ಯ ಭೇದಗಳನ್ನು ಮರೆಸಿ, ಶುದ್ಧಾತ್ಮವನ್ನು ನೋಡಲು ಸಹಕಾರಿ ಎಂದು ಅವರು ತಿಳಿದಿದ್ದರು. ವಿವೇಕಾನಂದರು ಭಾರತೀಯರಲ್ಲಿಯ ಜಾತೀಯತೆಯನ್ನು ಅಲ್ಲಗಳೆದಂತೆಯೇ ವಿದೇಶೀಯರಲ್ಲಿಯ ವರ್ಣಬೇಧ ನೀತಿ, ಜನಾಂಗೀಯ ದ್ವೇಷ, ಗುಲಾಮಗಿರಿ ಇತ್ಯಾದಿಗಳನ್ನು ಖಂಡಿಸಿದರು. ಎಲ್ಲರೂ ದೈವಾಂಶಸಂಭೂತರೇ ಎಂಬ ಅವರ ಭಾವನೆ ವಿಶ್ವಮಾನವತಾವಾದದ ಸೈದ್ಧಾಂತಿಕ ತಳಹದಿ. ನಾನು ರೂಪರಹಿತನಾಗಿ, ದೇಶ-ಕಾಲಗಳ ಹೊರತಾಗಿ, ವಿಶ್ವದ ಮೂಲಸ್ವರೂಪವೇ ಆಗಿದ್ದೇನೆ ಎಂದು ಒಮ್ಮೆ ಅವರು ಭಾವಪರವಶರಾಗಿ ಹೇಳಿದ್ದರು *(Marie Louise Burke, **Swami Vivekananda in the West**, 1994).* ಒಮ್ಮೆ ಆಲೆನ್ ಎಂಬ ಅಭಿಮಾನಿಯೊಬ್ಬರು ಅವರನ್ನು ಸಂದರ್ಶಿಸಿ ಬೀಳ್ಕೊಡುವಾಗ, ''ಸರಿ, ನಾವಿನ್ನು ಮುಂದೆ ಅಲಾಮಿಡಾದಲ್ಲಿ ಕಾಣುವಾ'' ಎಂದರು. ಆಗ ಸ್ವಾಮೀಜಿಯವರು, ''ಇಲ್ಲ ಆಲೆನ್, ಅಲಾಮಿಡಾದಲ್ಲಿ ನಾನಿಲ್ಲ; ನನ್ನಲ್ಲೇ ಅಲಾಮಿಡವಿದೆ'' ಎಂದು ನಗಾಡಿದರು. ೧೮೯೦ರಲ್ಲಿ ಒಮ್ಮೆ ಅವರು ಹೃಷಿಕೇಶದಲ್ಲಿ ತೀವ್ರ ಅಸ್ವಸ್ಥರಾದರು. ಅವರ ನಾಡಿಬಡಿತವೂ ಕ್ಷೀಣವಾಗಲು



ಪ್ರಾರಂಭವಾಯಿತು. ಅವರೊಂದಿಗೆ ಇದ್ದ ಸಂಗಡಿಗರಿಗೆ ಆತಂಕ ವಾಯಿತು. ಆಗ ಕ್ಷೀಣ ಸ್ವರದಲ್ಲಿ ಸ್ವಾಮೀಜಿಯವರು, ''ಗೊಂದಲ ಗೊಳ್ಳಬೇಡಿ, ನಾನು ಜಗತ್ತಿಗೆ ಇನ್ನೂ ಕೊಡುವುದಿದೆ – ಆ ತನಕ ನಾನು ಸಾಯಲಾರೆ'' ಎಂದು ಅವರನ್ನು ಸಂತೈಸಿದರು. *(Eastern and Western Disciples, **The Life of Swami Vivekananda**, 2 Vol.s, 2008 )*

### ವಿದೇಶೀಯರ ಮೇಲಿನ ಪ್ರಭಾವ

ಬಹುಶಃ ವಿದೇಶೀಯರ ಮೇಲೆ ವಿವೇಕಾನಂದರಷ್ಟು ಪ್ರಭಾವ ಬೀರಿದ ಭಾರತೀಯರು ಬೇರೆ ಯಾರೂ ಇಲ್ಲ. ಗಾಂಧೀಜಿಯವರ ಪ್ರಭಾವವು ಅಂತರರಾಷ್ಟ್ರೀಯ ಮಟ್ಟದಲ್ಲಿ ಸಾಕಷ್ಟು ಆಗಿದ್ದರೂ, ಆಧ್ಯಾತ್ಮಿಕ ನೆಲೆಯಲ್ಲಿ ಅದು ನಗಣ್ಯ. ವಿವೇಕಾನಂದರ ಪ್ರಭಾವ ಮಾನವರ ಸರ್ವತೋಮುಖ ವ್ಯಕ್ತಿತ್ವ ಮತ್ತು ಸಾಧನಾ ಕ್ಷೇತ್ರಗಳಿಗೆ ವಿಸ್ತರಿಸಿತ್ತು. ೧೮೯೫ರಲ್ಲಿ ಇಂಗ್ಲೆಂಡಿನಲ್ಲಿ ವಿವೇಕಾನಂದರ ಸಂಪರ್ಕಕ್ಕೆ ಒಳಗಾದ ಮಾರ್ಗರೆಟ್ ನೊಬೆಲ್, ಸಿಸ್ಟರ್ ನಿವೇದಿತಾ ಎಂದು ಹೆಸರು ಪಡೆದು, ಅವರ ಶಿಷ್ಯೆಯಾದರು. ಡಾ. ಎಮ್.ಲೋಗನ್, ''ಸ್ವಾಮೀಜಿಯವರ ದಿವ್ಯ ಉಪಸ್ಥಿತಿ ಇದ್ದಲ್ಲೆಲ್ಲಾ ಶಾಂತಿ–ಸಮಾಧಾನ ಪಸರಿಸುತ್ತಿತ್ತು. ನನ್ನ ಮನಸ್ಸಿನ ಗೊಂದಲ, ಸಂಶಯಗಳು ಅವರ ಧ್ವನಿಯು ಮೋಡಿಯಿಂದಲೇ ನಿವಾರಣೆಯಾಯಿತು. ಯಾರೂ ಅವರನ್ನು ಪ್ರೀತಿಸದೆ ಇರಲಾರರು. ಅವರ ಸಮದರ್ಶನವೆಂದರೆ, ದೇವರ ಅವತಾರದ ಸಂದರ್ಶನದ ಭಾಗ್ಯ'' ಎಂದು ತನ್ನ ಅನುಭವವನ್ನು ತಿಳಿಸಿದ್ದಾರೆ. ಜೋಸೆಫಿನ್ ಮೆಕ್ಲಿಯೋಡ್ ಎಂಬುವರು ವಿವೇಕಾನಂದರನ್ನು ಮೆಚ್ಚಿಕೊಂಡಿದ್ದು ಅವರ 'ಅಪರಿಮಿತ ವ್ಯಕ್ತಿತ್ವ'ಕ್ಕಾಗಿ (unlimitedness) ಎಂದಿದ್ದಾರೆ. ಸಿಸ್ಟರ್ ಕ್ರಿಸ್ಟಿನ್ ಹೇಳುವುದೇನೆಂದರೆ, ''ಯಾರಾದರೂ ಸ್ವಾಮೀಜಿಯವರನ್ನು ಒಮ್ಮೆ ಕಂಡರೆ ಅಥವಾ ಅವರ ಮಾತುಗಳನ್ನು ಕೇಳಿದರೆ, ಅವರನ್ನು ಅನುಸರಿಸಿದೆ ಇರಲು ಹೇಗೆ ಸಾಧ್ಯ? ಅವರ ದೇವತ್ವ ಎಲ್ಲರನ್ನೂ ಅವರತ್ತ ಆಕರ್ಷಿಸುವುದಾಗಿದೆ.'' ೧೮೯೫ ಜುಲಾಯಿ ೬ರಂದು ಮೇರೀ ಫಂಕೀ ಮತ್ತು ಕ್ರಿಸ್ಟಿನ್ ಗ್ರೀನ್‌ಸ್ಟಿಡೆಲ್ ಎಂಬುವರು ವಿವೇಕಾನಂದರ ಸಂದರ್ಶನಕ್ಕಾಗಿ ಬಂದಿದ್ದರು. ಅವರ ಅಂತರಂಗವನ್ನರಿತ ಸ್ವಾಮೀಜಿಯವರು ಅವರಿಗೆ ತಕ್ಕುದಾದ ಮಾರ್ಗದರ್ಶನ ಮಾಡಿದರು. ಆಮೇಲೆ, ಅವರೀರ್ವರೂ ವಿವೇಕಾನಂದರ ಶಿಷ್ಯರಾದರು. ೧೮೯೬ರಲ್ಲಿ ಸೇವಿಯರ್ಸ್ ದಂಪತಿಗಳೊಂದಿಗೆ ವಿವೇಕಾನಂದರು ರೋಮ್ ಸಂದರ್ಶಿಸಿದರು. ಅವರು ರೋಮ್ ಸಾಮ್ರಾಜ್ಯದ ವೈಭವ ಮತ್ತು ಅವನತಿಯ ಬಗ್ಗೆ ಹಾಗೂ ಅಲ್ಲಿಯ ಪ್ರಾಚೀನ ಕಲಾವೈಭವದ ಬಗ್ಗೆ ವಿವರಗಳನ್ನು ನೀಡಿದರು. ಅದನ್ನು ಕಂಡವರು, ''ಇವರೊಬ್ಬ ಅದ್ಭುತ ಸ್ವಾಮೀಜಿ. ಇವರಿಗೆ ರೋಮ್‌ನ ಪ್ರತಿಯೊಂದು ಶಿಲೆಯೂ ತಿಳಿದಿದೆಯಲ್ಲಾ'' ಎಂದು ಅಚ್ಚರಿ ವ್ಯಕ್ತಪಡಿಸಿದರು. ಲಿಯೋನ್ ಲ್ಯಾಂಡ್ಸ್‌ಬರ್ಗ್ ಎಂಬುವರು ವಿವೇಕಾನಂದರಿಂದ ಪ್ರೇರಿತರಾಗಿ ಅವರಿಂದ ಸಂನ್ಯಾಸದೀಕ್ಷೆ ಪಡೆದರು. ಜೆ.ಜೆ. ಗುಡ್‌ವಿನ್ ಸ್ವಾಮೀಜಿಯವರ ಪ್ರಭಾವಕ್ಕೆ ಒಳಗಾಗಿ, ಅವರಿಗೆ 'ಶೀಘ್ರಲಿಪಿಗಾರ'ರಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದರು. ಮಾನಸಿಕ ಖಿನ್ನತೆಗೆ ಒಳಗಾದ ಒಪೇರಾ ಹಾಡುಗಾರ್ತಿ ಎಮ್ಮಾ ಕಾಲ್ವಿ ವಿವೇಕಾನಂದರ ಪ್ರೇರಣೆಯಿಂದಾಗಿ ಜೀವನದಲ್ಲಿ ಮರುಸ್ಫೂರ್ತಿ ಪಡೆದಳು! ೧೯೦೦ರ ಜೂನ್‌ನಲ್ಲಿ ಲಿಲಿಯನ್ ಮಾಂಟ್‌ಗೋಮೆರಿ ಎಂಬುವರಿಗೆ ಸ್ವಾಮೀಜಿಯವರ ಸಂಪರ್ಕವಾಯಿತು. ಅವರು ಹೇಳುವಂತೆ, ''ಸ್ವಾಮೀಜಿಯವರು ಮಾತನಾಡಲು ಪ್ರಾರಂಭಿಸಿದೊಡನೆಯೇ ನಿರರ್ಗಳವಾದ ಶಬ್ದಪುಂಜಗಳು ಓತಪ್ರೋತವಾಗಿ ಹೊರಹೊಮ್ಮುತ್ತಿದ್ದವು. ಪ್ರತಿಯೊಂದು ಮಾತೂ ಮಹತ್ವಪೂರ್ಣವಾದ ಹೊಸ ಅರ್ಥ ನೀಡುವುದಾಗಿತ್ತು. ಅವರಲ್ಲಿ ಯಾವುದೇ ಅಹಂಭಾವವಿರಲಿಲ್ಲ. ನನಗರಿವಿಲ್ಲದ ಹೊಸದೊಂದು ಪ್ರಜ್ಞೆಯನ್ನು ಅವರು ತೆರೆದರು.'' ... ಈ ರೀತಿಯಾಗಿ ವಿವೇಕಾನಂದರ ಸಂಪರ್ಕಕ್ಕೆ ಬಂದ ವಿದೇಶಿಯರು ಅವರಿಂದ ಪ್ರಭಾವಿತರಾಗಿದ್ದರು. *(Sudish Garg, Article in **Prabuddha Bharata**, Aug. 2013)*

### ಸಮನ್ವಯ ಸರದಾರ

ವೈವಿಧ್ಯಮಯ ದಾರ್ಶನಿಕ ತತ್ತ್ವಗಳು, ವಿವಿಧ ನಂಬಿಕೆಗಳು, ಬಹುರೂಪಿ ಆಚರಣೆಗಳು, ಪಾಶ್ಚಾತ್ಯ–ಪೌರಾತ್ಯ ಸಾಂಸ್ಕೃತಿಕ ಅಂಶಗಳು, ಇತ್ಯಾದಿಗಳ ಸಮನ್ವಯ ವಿವೇಕಾನಂದರಲ್ಲಿ ನೆಲೆಯಾಗಿತ್ತು. ಅವರು ವಿರೋಧಾಭಾಸಗಳ ಸಮ್ಮಿಶ್ರಣವನ್ನು ಅರಗಿಸಿಕೊಂಡು, ಅದಕ್ಕೆ ಹೊಸರೂಪ ನೀಡಿ ಜಗತ್ತಿನ ಮುಂದಿಟ್ಟರು. ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ, ರಾಜಯೋಗಗಳ ಅನುಷ್ಠಾನವನ್ನು ಸಮಾಜದ ಅಭ್ಯುದಯಕ್ಕಾಗಿ ಮಾಡಬೇಕೆಂಬುದು ಸ್ವಾಮೀಜಿಯವರ ಅನಿಸಿಕೆ. ಅವರ ರಚನಾತ್ಮಕ ಪ್ರತಿಭಾಶಕ್ತಿಯನ್ನು 'ಸಮಚಿತ್ತತೆ' ಮತ್ತು 'ಸಿದ್ಧಾಂತ ಸಮನ್ವಯ' (equilibrium and synthesis) ಎಂಬ ಎರಡು ಶಬ್ದಗಳಲ್ಲಿ ಸಂಕ್ಷಿಪ್ತವಾಗಿ ಹೇಳಬಹುದು. *(Romain Rolland, **'The Life of Vivekananda and the Universal Gospel'**)*

ಸ್ವಾಮಿ ವಿವೇಕಾನಂದರ ಮೊದಲು ಯಾವದೇ ಭಾರತೀಯನೂ ಅಷ್ಟು ದೀರ್ಘಾವಧಿ ವಿದೇಶಗಳಲ್ಲಿ ಸಂಚರಿಸಲಿಲ್ಲ ಹಾಗೂ ವಾಸಿಸಲಿಲ್ಲ. ಅವರು ಪಾಶ್ಚಾತ್ಯ ಮತ್ತು ಪೌರಾತ್ಯ, ಈ ಎರಡು ವಿಭಿನ್ನ ಸಂಸ್ಕೃತಿಗಳಿಗೆ ಚಿರಪರಿಚಿತರಾಗಿ, ಮೂರು ಖಂಡಗಳನ್ನು ಸುತ್ತಿದವರಾಗಿದ್ದರು. *(Prof. Makarand Paranjape, Article in **Frontline**, Feb.8, 2013)* ''ನಾನು ಹೇಗೆ ಭಾರತಕ್ಕೆ ಸೇರಿದವನಾಗಿದ್ದೇನೆಯೋ ಹಾಗೇ ಜಗತ್ತಿಗೇ ಸೇರಿದವನಾಗಿದ್ದೇನೆ. ನಾನು ಯಾವುದೇ ದೇಶದ ಗುಲಾಮನಲ್ಲ'' ಎಂಬ ಸ್ವಾಮೀಜಿಯವರ ಸ್ಪಷ್ಟೋಕ್ತಿ ಅವರ 'ವಿಶ್ವವ್ಯಾಪಕತ್ವ'ದಲ್ಲಿ ಸದಾ ಪ್ರತಿಧ್ವನಿಸುವುದು. ✷

# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ ೧೦

**ಬಾ**ಬಾ ಕೋಣೆಯಲ್ಲಿ ಮಲಗಿದ್ದಾರೆ. ಸಂಜೆ ನಸುಗತ್ತಲು. ಭಕ್ತನೊಬ್ಬನು ಬಂದು ಬಾಗಿಲಲ್ಲಿ ನಿಂತಿದ್ದಾನೆ. ಬಾಬಾ ಅವರ ಅಪ್ಪಣೆಗೆ ಕಾಯುತ್ತಿದ್ದಾನೆಂದು ತೋರುತ್ತದೆ. ಬಾಬಾ ಹೇಳಿದರು: ''ಯಾರದು? ನೀನು ಅದೆಂಥ ಅಂಗಿಯನ್ನು ತೊಟ್ಟಿದ್ದೀಯೆ? ಬಿಳಿಯದೊ, ಕಾವಿ ಬಣ್ಣದ್ದೊ? ಕಾವಿಬಣ್ಣದ ಅಂಗಿಯನ್ನು ತೊಟ್ಟ ಒಬ್ಬರನ್ನು ನೀನೀಗ ನಿಂತಿರುವ ಸ್ಥಳದಲ್ಲೇ ನೋಡಿದೆ. ಅವರ ತಲೆ ನಿನ್ನಂತೆಯೇ. ಆದರೆ ಸ್ವಲ್ಪ ದಪ್ಪವಾಗಿದ್ದಾರೆ. ಮಣಿ (ಸ್ವಾಮಿ ಅನ್ನದಾನಂದ) ಕೋಣೆಯಲ್ಲಿಲ್ಲ ತಾನೆ?

ವೈಶಾಖ, ಜ್ಯೇಷ್ಠ, ಆಷಾಢಗಳು ಕಳೆದು ಶ್ರಾವಣವೂ ಕಳೆದು ಹೋಗುತ್ತಿದೆ. ಮೂರು ತಿಂಗಳ ಅವಧಿ ಮೂರು ದಿನದಂತೆ ಕಳೆದು ಹೋಗಿವೆ. ಕಲ್ಕತ್ತದಿಂದ ಪತ್ರ ಬಂದಿದೆ – ಭಕ್ತನೀಗ ಹಿಂದಿರುಗ ಬೇಕು. ಇನ್ನೂ ಕೆಲವು ದಿನ ಇದ್ದು ಅವನು ಹೋಗಲಿ ಎಂಬುದೇ ಬಾಬಾ ಇಚ್ಛೆ. ಒಂದು ದಿನ ಠಾಕೂರರಿಗೆ ಅಡುಗೆ ಮಾಡಿ ನಿವೇದಿಸುವ ವಿಷಯವಾಗಿ ಆಲೋಚನೆ ನಡೆಯುತ್ತಿದೆ. ಬಹರಾಂಪುರದ ಭಕ್ತರು ಒಂದು ಭಾನುವಾರದಂದು ಬಂದು, ಠಾಕೂರರಿಗೆ ರಾಧಾವಲ್ಲಭಿ, ಛಾನಾವಡೆ (ಬಂಗಾಳಿ ಖಾದ್ಯವಸ್ತುಗಳು) ಇತ್ಯಾದಿಗಳನ್ನು ತಯಾರಿಸಿ ನೈವೇದ್ಯ ಮಾಡಬೇಕೆಂದುಕೊಂಡಿದ್ದಾರೆ. ಆದರೆ ಮಳೆ ಬಿಡುತ್ತಲೇ ಇಲ್ಲ. ಕೊನೆಗೆ ಭಕ್ತ, ''ನಾನು ಈಗ ಹೋಗಿ 'ಅಡುಗೆಯ ನೈವೇದ್ಯ' ಮಾಡುವ ದಿನದಂದು ಬರುತ್ತೇನೆ'' ಎಂದ.

ಕೊನೆಗೆ ಬಾಬಾ ಒಪ್ಪಿದರು. ಅಂದು ಬುಧವಾರ. ಬೆಳಗ್ಗೆಯೇ ಸ್ನಾನ ಮಾಡಿ, ತಿಂಡಿ-ತೀರ್ಥ ಮುಗಿಸಿ ಭಕ್ತನು ಹೊರಡಲು ಸಿದ್ಧವಾಗಿ, ಬಾಬಾರಿಗೆ ಪ್ರಣಾಮ ಸಲ್ಲಿಸಲು ಬಂದಿದ್ದಾನೆ. ಬಾಬಾ ಕತೆ ಹೇಳತೊಡಗಿದರು: ''ನೀನು ನಿಜವಾಗಿಯೂ ಭಗವಂತನನ್ನು ಪಡೆಯಬೇಕೆಂದಿದ್ದರೆ, ಕಲ್ಕತ್ತೆಗೆ ಹೋದರೆ ಶಾಂತಿ ಸಿಗುವುದಿಲ್ಲ. ಅಂಥ surrounding (ಪರಿಸರ) ನಲ್ಲಿದ್ದರೆ, ಮನಸ್ಸೂ ಹಾಗಾಗುತ್ತದೆ. ಸಾಧುಗಳ ನಡುವೆ ಇದ್ದರೆ ಮನಸ್ಸು ಸಾಧುವಿನಂತೆ, ಸಂಸಾರಿಗಳೊಂದಿಗಿದ್ದರೆ ಸಂಸಾರಿಯಂತೆ. ಯಾರು ಮದುವೆಯಾಗುವುದಿಲ್ಲವೋ ಅವರು ಸಂಸಾರದಲ್ಲಿ ಯಾಕಿರಬೇಕು? ತಾಯಿ-ತಂದೆಯರ ಬಳಿ ಜೀವನದ ಎಷ್ಟು ವರ್ಷಗಳು ಕಳೆದುಹೋದವು! ನನ್ನೊಂದಿಗೆ ಒಂದು ವರ್ಷವಾದರೂ ಕಳೆಯಬೇಡವೆ? ಸರಿ, ಹೋಗಬೇಕೆಂದಿರುವೆ, ಈಗ ಹೋಗು. ನಾನು ಕರೆದ ಕೂಡಲೇ ಬರಬೇಕು. ಯಾವ ಯಾವಾಗ ಏನೇನು ಹೇಳಿದ್ದೇನೋ ಅದನ್ನೆಲ್ಲ ನೆನಪಿಟ್ಟುಕೊ. common sense ಬಗ್ಗೆ ನಾನು ಹೇಳಿದ್ದು ನೆನಪಿದೆ ತಾನೆ? ಏನನ್ನಾದರೂ ಕಲಿಯುವಾಗ ಅತಿಚಿಕ್ಕ ವಿವರಗಳನ್ನೂ ಕೂಲಂಕಷವಾಗಿ ಕಲಿ. ಎಲ್ಲರ ಮುಂದೆ ಎಲ್ಲ ವಿಷಯಗಳನ್ನೂ ಹೇಳಬೇಡ.''

೧೦ ಗಂಟೆಗೆ ರೈಲಿನ ಸೀಟಿ ಊದಿತು. ರೈಲು ಕೂಗುತ್ತಾ ಬರುತ್ತಿರುವುದು ಆಶ್ರಮದಿಂದ ಕಾಣುತ್ತಿತ್ತು. ಭಕ್ತನು ಬೇಗನೆ ಪ್ರಣಾಮ ಮಾಡಿ ಹೊರಡಬೇಕು, ಓಡಿಹೋಗಿ ರೈಲನ್ನು ಹತ್ತಬೇಕು. ಬಾಬಾ ನಗುತ್ತಾ, ''ನೀನಿನ್ನು ಈ ರೈಲಿನಲ್ಲಿ ಹೋದಂತೆಯೆ!'' ಎಂದರು.

ಹೋಗಲಾಗಲಿಲ್ಲ. ಅಂಗಿ ಧರಿಸಿಕೊಂಡ ಭಕ್ತ ಕುಳಿತೇ ಇದ್ದ. ಸಂಜೆಯ ಗಾಡಿಯಲ್ಲಿ ಅವನು ಹೋಗಲೇಬೇಕು. ಸಂಜೆ ಬಾಬಾಗೆ ಪ್ರಣಾಮ ಮಾಡಲು ಹೋದಾಗ ಅವರು ಗಟ್ಟಿಯಾಗಿ ನಕ್ಕರು. ''ಎಲ್ಲಿಗೆ ಹೋಗುವೆ? ನೋಡುತ್ತಿದ್ದೀಯಲ್ಲ, ಠಾಕೂರರು ನಿನ್ನನ್ನು ಹೋಗಲು ಬಿಡುತ್ತಿಲ್ಲ'' ಎಂದರು. ಕೊನೆಗೆ, ''ಒಳ್ಳೆಯದು, ಹೋಗಿ ಬಾ. ನೈವೇದ್ಯ ಮಾಡುವಂದು ಬಂದುಬಿಡು'' ಎಂದರು.

* * *

ಕಲ್ಕತ್ತೆಗೆ ಬಂದರೂ ಭಕ್ತನಿಗೆ ಶಾಂತಿಯಿಲ್ಲ. ಮತ್ತೆ ಯಾವಾಗ ಸಾರಗಾಛಿಗೆ ಹೋಗುತ್ತೇನೊ, ಯಾವಾಗ 'ಅಡುಗೆ ನೈವೇದ್ಯ' ಮಾಡುವೆನೋ ಎಂದೆಲ್ಲ ಚಿಂತೆ. ೨-೩ ವಾರಗಳಲ್ಲಿ ಪತ್ರ ಬಂತು. ಮುಂದಿನ ಭಾನುವಾರ 'ಅಡುಗೆ ನೈವೇದ್ಯ' ಮಾಡುತ್ತಾರೆಂದೂ, ಆದರೆ ಒಂದೇ ಸಮನೆ ಮಳೆ ಬರುತ್ತಿದೆಯೆಂದೂ ಅದರಲ್ಲಿ ತಿಳಿಸಲಾಗಿತ್ತು. ಭಕ್ತನಿಗೆ ಗಾಬರಿಯಾಯಿತು, ಮತ್ತೆ ಅದನ್ನು ರದ್ದುಗೊಳಿಸುವುದಿಲ್ಲ ತಾನೆ! ಅಡುಗೆ ನೈವೇದ್ಯವನ್ನಂತೂ ಮಾಡಲಾಯಿತು; ಆದರೆ ಭಕ್ತನಿಗೆ ಮಾತ್ರ ಹೋಗಲಾಗಲಿಲ್ಲ. ಸಿಯಲ್ದಾದಿಂದ ಅವನು ಸಾರಗಾಛಿಯ ರೈಲು ಹಿಡಿಯಬೇಕಾಗಿದ್ದ ಶನಿವಾರದಂದು ರಾತ್ರಿ, ಹೌರಾದಿಂದ ಕಾಶಿಗೆ ಯಾತ್ರೆ ಮಾಡಿದ.

ಕಾಶಿಯಿಂದ ಬಾಬಾಗೆ ಅನ್ನಪೂರ್ಣ-ವಿಶ್ವನಾಥರ ನಿರ್ಮಾಲ್ಯ (ಪ್ರಸಾದ)ವನ್ನು ಕಳುಹಿಸಿದ. ಕೆಲವು ದಿನಗಳಲ್ಲೇ ಠಾಕೂರರ ಅಡುಗೆ ನೈವೇದ್ಯ ಪ್ರಸಾದದೊಂದಿಗೆ ಆಶೀರ್ವಾದದ ಪತ್ರ ಬಂತು: ''ಇಲ್ಲಿಗೆ ಬರಲು ಹೊರಟ ನೀನು ತಾಯಿಯನ್ನು ಕರೆದುಕೊಂಡು ಕಾಶಿಗೆ ಹೋದೆ. ಅದು ನಿನ್ನ ಭಾಗ್ಯವೇ ಸರಿ. 'ಅಡುಗೆ ನೈವೇದ್ಯ'ದ ದಿನದಂದು ನೀನು ಬಾರದಿದ್ದುದು ಒಳಿತೇ ಆಯಿತು. ಯಾರಿಗೆಷ್ಟು ಲಭ್ಯವೋ ಅಷ್ಟೇ ಲಭಿಸುವುದು. ತಾಯಿ-ತಂದೆಯರಿಗೆ ಅಸಂತೋಷವನ್ನುಂಟುಮಾಡಬಾರದು. ನೀನು ಗುರುವಿನ ಕೃಪೆಯಿಂದ ಸಂಸಾರಬಂಧನದಿಂದ ಮುಕ್ತನಾಗುವೆ.''

ಕಲ್ಕತ್ತೆಗೆ ಹಿಂದಿರುಗಿದ ನಂತರ ಮಹಾಲಯ ಅಮಾವಾಸ್ಯೆಯ ದಿನ ಭಕ್ತನಿಗೆ ಬಾಬಾರಿಂದ ಒಂದು ಪತ್ರ ಬಂತು, ''ನನ್ನ ದೇಹಾರೋಗ್ಯ ಚೆನ್ನಾಗಿಲ್ಲ. ಬೇಗನೆ ಬಂದು ಒಮ್ಮೆ ನೋಡಿ ಹೋಗು'' ಎಂದು.

ದೇವೀಪಕ್ಷ ಬಂದಿದೆ (ದುರ್ಗಾಪೂಜೆಯ ಪಕ್ಷ, ನವರಾತ್ರಿಯ ದಿನಗಳು.) ಭಕ್ತನು ತಾನು ಚಿರಕಾಲವೂ ಬಯಸುವ ಪವಿತ್ರ ಪಾದಗಳ ಆಶ್ರಯದಲ್ಲಿರಲು ಮತ್ತೆ ಸಾರಗಾಛಿ ಆಶ್ರಮವನ್ನು ತಲುಪಿ, ಆನಂದಸಾಗರದಲ್ಲಿ ಮುಳುಗಿದನು.

**ಅಕ್ಟೋಬರ್ ೧೯೩೬:** ಭಕ್ತನು ಪ್ರಣಾಮ ಮಾಡಿ ಎದ್ದಾಗ ಬಾಬಾ ಹೇಳಿದರು: ''ಬೆಳಗ್ಗೆ ಚಿಂತಿಸುತ್ತಿದ್ದೆ, 'ಸ್ಮೃತಿಕಥೆ' ಯಾರು ಬರೆಯುತ್ತಾರೆ? ಅಂತ. ಈಗ ನೋಡಿದರೆ, ನೀನೆ ಬಂದಿದ್ದೀಯಾ.'' ಸ್ವಲ್ಪ ನಂತರ, ''ಕೆಲಸ ಆರಂಭಿಸು. ನಿನ್ನನ್ನು ಉತ್ತಮ ಕೆಲಸಗಾರನನ್ನಾಗಿ ಮಾಡುತ್ತೇನೆ'' ಎನ್ನುತ್ತಾ ಬೆನ್ನಿಗೆ ಒಂದೇಟು ಬಿಗಿದು, ''ನಿನಗೂ ಕೆಲಸ, ನನಗೂ ಕೆಲಸ'' ಎಂದರು.

ಮಾರನೆಯ ದಿನವೇ ಕೆಲಸ ಪ್ರಾರಂಭವಾಯಿತು. ಭಕ್ತನು ನೆಲದಲ್ಲಿ ಆಸನ ಹಾಕಿ, ಡೆಸ್ಕ್‌ನ ಮೇಲೆ ಬರೆಯುತ್ತ ಹತ್ತಿರವಿದ್ದವನೊಂದಿಗೆ ಏನೋ ಮಾತನಾಡುತ್ತಿದ್ದ. ಅದು ಬಾಬಾಗೆ ಕೇಳಿಸಿತು. ಅವರು ನಿಧಾನವಾಗಿ ಹಿಂದಿನಿಂದ ಬಂದು, ''ಕೆಲಸ ಮಾಡುವಾಗ ಮಾತನಾಡಬಾರದು, ಕೇಳಲೂಬಾರದು. ಸ್ವಾಮೀಜಿ ಒಂದು ದಿನ ಕಾಗದ ಓದುತ್ತಿದ್ದಾಗ ನಾನು ಅವರನ್ನು ಅಲುಗಾಡಿಸಿ ಕರೆದೆ. ಒಂದೇ ಮನಸ್ಸಿನಿಂದ ಓದುತ್ತಿದ್ದ ಅವರು, 'ನನಗೆಷ್ಟು ಮನಸ್ಸುಗಳಿವೆ?' ಎಂದರು. ಏನು ಮಾಡುವುದಿದ್ದರೂ ಮನಸ್ಸನ್ನು ಸಂಪೂರ್ಣ ಅದರಲ್ಲಿ ತೊಡಗಿಸಬೇಕು. ಆಗ ಮಾತು ನಿಂತುಹೋಗುವುದು'' ಎಂದರು.

'ಸ್ಮೃತಿಕಥೆ'ಯ ಹಸ್ತಪ್ರತಿ ತಯರಾಗುತ್ತಿದೆ. ಪ್ರೆಸ್ಸಿಗೆ ಹೋಗಬೇಕು. 'ಬಸುಮತಿ'ಗೆ (ಬಂಗಾಳಿ ಪತ್ರಿಕೆ) ಕಾಗದಪತ್ರ ಬರೆದಾಗಿದೆ. ಭಕ್ತ ಹೇಳಿದ, '' 'ಉದ್ಬೋಧನ' ಹೇಗೂ ನಮ್ಮದೇ. 'ಬಸುಮತಿ'ಯೂ ನಮ್ಮದೇ ಪತ್ರಿಕೆ. ಉಪೇನ್ ಬಾಬುವಿಗೆ ಠಾಕೂರರ ಮೇಲೆ ಎಂತಹ ಭಕ್ತಿ! 'ಬಸುಮತಿ'ಯೇ ನಮ್ಮ ಮೊದಲ ಪತ್ರಿಕೆ; ಅನಂತರವಷ್ಟೇ 'ಉದ್ಬೋಧನ' ಪ್ರಾರಂಭವಾಯಿತು.''

* * *

ದುರ್ಗಾಪೂಜೆಯ ಕೆಲವು ದಿನ ನನ್ನ ತಾಯಿಯೊಂದಿಗೆ ಕಳೆದೆ. ತ್ರಯೋದಶಿಯಂದು ಸಂಜೆ ಸಾರಗಾಛಿಗೆ ಹಿಂದಿರುಗಿದಾಗ ಬಾಬಾ ಹೇಳಿದರು: ''ಇಂದು ನೀನು ಬಂದೇ ಬರುತ್ತೀ ಅಂತ ನನಗೆ ತಿಳಿದಿತ್ತು.'' ಮಾರನೆಯ ದಿನ ಬೆಳಗ್ಗೆ ಹೇಳಿದರು, ''ಈಗ ನನಗೇನು ಇಷ್ಟವೆಂದು ನಿನಗೆ ಗೊತ್ತೆ? ನಿರ್ಜನ ಪ್ರದೇಶದಲ್ಲಿ ಎಲ್ಲಾದರೂ – ಪರ್ವತ ಪ್ರದೇಶದಲ್ಲೋ, ಕಾಡಿನಲ್ಲೋ, ನದಿಯ ತೀರದಲ್ಲೋ ಚಿಕ್ಕದೊಂದು ಕುಟೀರದಲ್ಲಿರಬೇಕು. ಯಾರು ಹುಡುಕಿದರೂ ಸಿಗಬಾರದು. ಅವರೇನು ಹೇಳುತ್ತಾರೆ ಗೊತ್ತೆ? 'ಸಾರಗಾಛಿಯೇನು ನಿರ್ಜನಪ್ರದೇಶವೆ? ನೀವೆಲ್ಲಿಗೆ ಹೋದರೂ ನಿಮ್ಮನ್ನು ಕಂಡು ಹುಡುಕುತ್ತೇವೆ.' ಅಲ್ಲಿ ಇನ್ನೇನು ಇರಬೇಕು ಗೊತ್ತೆ? ಆ ನಿರ್ಜನ ಸ್ಥಳದಲ್ಲಿ ನನ್ನೊಂದಿಗೆ ನಾನು ಹೇಳಿದ ಹಾಗೆ ಕೇಳುವ, ಪ್ರೀತಿಯಿಂದ ಸೇವೆ ಮಾಡುವ ಮೂರು–ನಾಲ್ಕು ಮಂದಿ ಹುಡುಗರಿರಬೇಕು. ಅವರಿಂದ 'ಸ್ಮೃತಿಕಥೆ', 'ಭ್ರಮಣಕಥೆ' ಎಲ್ಲವನ್ನೂ ಬರೆಸುತ್ತೇನೆ. ಪ್ರೀತಿಯಿಂದ ಸೇವೆ ಮಾಡುವವರೊಂದಿಗೆ ನಾನು ಚಿಕ್ಕ ಹುಡುಗನಂತಾಗಿಬಿಡುತ್ತೇನೆ. ಅವರಿಗಿಷ್ಟ ಬಂದಂತೆ ನನ್ನೊಂದಿಗೆ ಆಟವಾಡಬಹುದು. ನಾನು ಅವರಲ್ಲಿ ಒಂದಾಗಿಬಿಡುತ್ತೇನೆ.'' ಬಾಬಾ ತಮ್ಮಲ್ಲೇ ಹಾಡತೊಡಗಿದರು: '' **'...ದರದೀ ಬಿನೇ ಪ್ರಾಣ್ ಬಾಚೇ ನಾ।'** (...ನಿನ್ನನ್ನು ಕಳೆದುಕೊಳ್ಳುವೆವು ಎಂಬ ಭಯದಿಂದಿರುವೆವು) ನಮ್ಮ ಕೈಗಳನ್ನು ಹಿಡಿದುಕೊಂಡು ಠಾಕೂರರು ಈ ಹಾಡುಗಳನ್ನೆಲ್ಲ ಹಾಡುತ್ತಿದ್ದರು!''

ಒಂದು ಸಲ 'ಸ್ಮೃತಿಕಥೆ'ಯ ಹಸ್ತಪ್ರತಿಯಲ್ಲಿ ಅನುಕ್ರಮ ತಪ್ಪಿಹೋಗಿದೆ, ಯಾವುದರ ನಂತರ ಯಾವುದೆಂದು ತಿಳಿಯುತ್ತಿಲ್ಲ ಎಂದಾಗ ಬಾಬಾ, ''ಏನು ಕ್ರಮ ತಪ್ಪಿಹೋಗಿದೆ, ಬೆರೆತು ಹೋಗಿದೆ. ಎಲ್ಲ ಬೆರೆತು ಹೋಗಿವೆ ತಾನೆ? ನೋಡಿಲ್ಲಿ – ಎಲುಬು, ಮಾಂಸ, ಮೇದಸ್ಸು, ಮಜ್ಜೆ ಎಲ್ಲವೂ ಸೇರಿಕೊಂಡು ಶರೀರವಾಗಿದೆ ತಾನೆ? ಬ್ರಹಜ್ಞಾನವನ್ನು ಆದರ್ಶವಾಗಿಟ್ಟುಕೊಂಡು ಬಂದಿರುವವರು ಇದರಿಂದಲೇ ಕ್ರಮವನ್ನು ಹೊರಗೆಡಹಬೇಕು. ಇದೇನು ಸುಲಭದ ಕೆಲಸವೆ?''

ಒಂದು ದಿನ ಸಂಜೆ ಬಾಬಾ ಅವತಾರ ಪುರುಷರ ಚರಿತ್ರೆ, ಜ್ಞಾನ–ಭಕ್ತಿ, ಮಾಯೆ–ಮುಕ್ತಿ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ಹೇಳಿದರು. ಆ ವಿಷಯಗಳು ಚೆನ್ನಾಗಿ ನೆನಪಿದ್ದವು; ಅಂದೇ ದಿನ ರಾತ್ರಿ ಅವುಗಳನ್ನು ಸಂಕ್ಷಿಪ್ತವಾಗಿ ಬರೆದೆ. ಅವುಗಳನ್ನು ಮುಂದಿನ ಪುಟಗಳಲ್ಲಿ ಕೊಡಲಾಗಿದೆ.

''ಅವತಾರ ಪುರುಷರಿಗೆ ಕೆಲವು ಲಕ್ಷಣಗಳಿವೆ. ಅವರಿಗೆ ಶೋಕ, ಮೋಹ, ಭ್ರಮೆಗಳಿರುವುದಿಲ್ಲ. ಅವರು ಯಾವಾಗಲೂ ಆದರ್ಶ ಜೀವನವನ್ನೇ ನಡೆಸುತ್ತಾರೆ. ಕೃಷ್ಣನನ್ನು ಪೂರ್ಣಬ್ರಹ್ಮ ಎನ್ನುವುದೇಕೆ? ಆತನೆಂದೂ ಶೋಕ, ಮೋಹ ಭ್ರಮೆಗಳಿಗೆ ಒಳಗಾಗಲಿಲ್ಲ.

''ಸಮುದ್ರದಲ್ಲಿ ಜಲಕ್ರೀಡೆಯಾಡುತ್ತಿದ್ದಾರೆ. ರುಕ್ಮಿಣಿ, ಬಲರಾಮ ಎಲ್ಲರೂ ಮತ್ತರಾಗಿದ್ದಾರೆ. ಆಟ ಮುಗಿದ ನಂತರ ಹೊಡೆದಾಟ, ಗಲಾಟೆ. ಆಗಲೇ ಯದುವಂಶವು ನಾಶವಾಗುವುದೆಂದು ಕೃಷ್ಣನಿಗೆ ತಿಳಿಯಿತು. ಆತ ನೀರಿನಿಂದೆದ್ದು, ತೀರದಲ್ಲಿದ್ದ ಒಂದು ಚಿಕ್ಕ ಬಂಡೆಯ ತುದಿಗೆ ಹೋಗಿ, ತನ್ನ ಪೀತಾಂಬರವನ್ನು ಬೀಸತೊಡಗಿದ. ನೋಡು, ಅವನು ಯಾವಾಗಲೂ ಸಚೇತನ! ಇತ್ತ ಬಲರಾಮ

ಕೃಷ್ಣನಿಲ್ಲದ್ದನ್ನು ಗಮನಿಸಿದ. 'ಕೃಷ್ಣನೆಲ್ಲಿ? ಕೃಷ್ಣನಿಲ್ಲವಲ್ಲ! ಹಾಗಾಗಿ ಇನ್ನುಮೇಲೆ ಆಟದಲ್ಲಿ ಆನಂದವಿಲ್ಲ.' ಅವನು ಅಲ್ಲಿಂದ ಎದ್ದು ಬಿಟ್ಟ. ಆ ಬಳಿಕ ಎಲ್ಲರೂ ಒಬ್ಬಬ್ಬರಾಗಿ ಎದ್ದುಬಿಟ್ಟರು. ಇಲ್ಲೊಂದು ತಮಾಷೆಯಿದೆ. ಜಲಕ್ರೀಡೆಯ ನಂತರ ಭವ್ಯ ಭೋಜನದ ವ್ಯವಸ್ಥೆ ಯಿತ್ತು – ನಾನಾ ಬಗೆಯ ಮದ್ಯ, ಮಾಂಸ ಇತ್ಯಾದಿ.

''ಮತ್ತೆ ನೋಡು, ಕೃಷ್ಣನು ಆದರ್ಶ ಸಂಸಾರಿ. ಅತಿಥಿ ಸತ್ಕಾರ ಮಾಡುವುದು ಸಂಸಾರಿಯ ಒಂದು ಪ್ರಧಾನ ಕರ್ತವ್ಯ. ಅತಿಥಿಗೆ ಯಾವಾಗ ಏನು ಬೇಕೋ ತಿಳಿದು, ಅವರ ಇಚ್ಛೆಯನ್ನು ಈಡೇ ರಿಸಬೇಕು. ಅತಿಥಿಯು ನಾರಾಯಣನೇ ಎಂಬ ಭಾವನೆಯಿಂದ ಆತನ ಸೇವೆ ಮಾಡಬೇಕು. ಕೃಷ್ಣನು ಗೃಹಸ್ಥಧರ್ಮವನ್ನು ಹೇಗೆ ನಿರ್ವಹಿಸುತ್ತಿದ್ದಾನೆಂದು ಪರೀಕ್ಷಿಸಲು ದೂರ್ವಾಸರು ಅವನ ಬಳಿಗೆ ಹೋದರು. ಅವರ ಹೆಸರನ್ನು ಕೇಳಿಯೇ ಎಲ್ಲರೂ ಭಯಭೀತ ರಾಗಿದ್ದಾರೆ. ಆದರೆ ಅವರ ಶಾಪದಿಂದ ಜನ್ಮಜನ್ಮಾಂತರದ ಪಾಪ ಗಳೆಲ್ಲ ಕಳೆಯುತ್ತವೆ ಎಂಬುದು ಅವರಿಗೆ ಗೊತ್ತಿಲ್ಲವಲ್ಲ? ಇದಕ್ಕೆ 'ಕೋಪರೂಪೀ ಕೃಪೆ' ಎನ್ನುತ್ತಾರೆ. ದೂರ್ವಾಸರು ಬಂದು ಕೃಷ್ಣನಿಗೆ ''ನೀನು ಯಾವ ರೀತಿ ಸೇವೆ ಮಾಡುತ್ತೀಯಾ?'' ಎಂದರು. ಅದಕ್ಕೆ ಕೃಷ್ಣ ನಗುನಗುತ್ತ, ''ಪ್ರಭುವಿಗೆ ಯಾವ ರೀತಿ ಬೇಕೊ, ಸೇವಕ ಹಾಗೇ ಮಾಡಲು ಸಿದ್ಧ'' ಎಂದ. ಅದಕ್ಕೆ ದೂರ್ವಾಸರು, ''ಸಸ್ತ್ರೀಕೊ ಧರ್ಮಮಾಚರೇತ್ – ಇಂದು ನೀವಿಬ್ಬರೂ ನನ್ನ ಸೇವೆ ಮಾಡ ಬೇಕು. ನೀರು ಸೇದಿ, ಸ್ನಾನ ಮಾಡಿಸಿ, ಒಲೆಯಲ್ಲಿ ಅಡಿಗೆ ಮಾಡಿ ಉಣಬಡಿಸಬೇಕು. ನಂತರ ನಾನೇನು ಹೇಳುವೆನೊ, ಅದೆಲ್ಲವನ್ನೂ ಮಾಡಬೇಕು'' ಎಂದರು. ಕೃಷ್ಣ, ರುಕ್ಮಿಣಿ ಇಬ್ಬರೂ ಒಂದೊಂದಾಗಿ ಎಲ್ಲವನ್ನೂ ಮಾಡಿದರು. ಊಟಕ್ಕೆ ಕುಳಿತಾಗ ರುಕ್ಮಿಣಿ ಗಾಳಿ ಬೀಸ ತೊಡಗಿದಳು. ಊಟವಾದ ಮೇಲೆ ಮುನಿವರರು, ''ಕಾಲನ್ನು ಒತ್ತು'' ಎಂದರು. ವಿಶ್ರಾಂತಿಯ ಬಳಿಕ, ''ರಥದಲ್ಲಿ ತಿರುಗಾಡಲು ಕರೆದುಕೊಂಡು ಹೋಗು'' ಎಂದರು. ರಥ ಬಂದಾಗ, ''ಕುದುರೆ ಗಳು ಬೇಡ. ನೀವಿಬ್ಬರೇ ಎಳೆಯಿರಿ'' ಎಂದರು. ಆಗಲೂ ಇವರಿ ಬ್ಬರೂ ಉಪವಾಸವಿದ್ದಾರೆ, ಏಕೆಂದರೆ ಅತಿಥಿ ಇನ್ನೂ ತೃಪ್ತರಾಗಿಲ್ಲ. ಎಲ್ಲರೂ ಕಂಗೆಟ್ಟಿದ್ದರು. ಆದರೆ ಕೃಷ್ಣ ನಿರ್ವಿಕಾರನಾಗಿದ್ದಾನೆ, ಮುಖದಲ್ಲಿ ಮುಗುಳ್ನಗೆ. ಕೂಡಲೆ ಕುದುರೆಯನ್ನು ಬಿಚ್ಚಿ, ನಗರದ ಮಧ್ಯದಲ್ಲಿ ಇಬ್ಬರೂ ರಥವನ್ನೆಳೆದರು. ಕೈಕಾಲುಗಳಿಂದ ರಕ್ತ ಸುರಿ ಯುತ್ತಿತ್ತು. ದೂರ್ವಾಸರಿಗೆ ಇನ್ನು ತಡೆಯಲಾಗಲಿಲ್ಲ. ಗಾಡಿಯಿಂ ದಿಳಿದು, ಕೃಷ್ಣನ ಪಾದಕ್ಕೆರಗಿ, ''ಪ್ರಭು ನೀವು ಇಷ್ಟೊಂದು ಏಕೆ ಮಾಡುತ್ತಿದ್ದೀರೆಂದು ಈಗ ನನಗರ್ಥವಾಯಿತು. ಅವತಾರ ಪುರು ಷನ ಜೀವನವೆಂದರೆ ಇದೇ, ಜಗತ್ತಿಗೆ ಆದರ್ಶವೇನೆಂದು ತೋರಿಸಿ ಕೊಡುವುದು!'' ಎಂದರು.

''ರಾಮ ಮಾಡಿದ ತಪ್ಪು ಏನೆಂದರೆ, ವಾಲಿವಧೆ, ಶೋಕ–ಮೋಹ, ಸೀತಾವಿಲಾಪ ಇವು. ಆದ್ದರಿಂದಲೇ ಠಾಕೂರರು, 'ರಾಮ ಹನ್ನೆರಡಾಣೆ, ಕೃಷ್ಣ ಹದಿನಾರಾಣೆ. ಅದಕ್ಕೆ ಎಲ್ಲಿ ಹೊಡೆದರೂ 'ಟಂಗ್' ಎಂದು ಸದ್ದು ಬರುತ್ತದೆ. ಅವತಾರಪುರುಷರ ಜೀವನದಲ್ಲಿ ಒಂದು ಸ್ವಾರಸ್ಯವಿದೆ. ಯಾವಾಗಲೆಂದರೆ ಆಗ, ಎಲ್ಲೆಂದರಲ್ಲಿ ಅವ ತಾರಗಳ ಆವಿರ್ಭಾವವಾಗದು. ಅನೇಕ ಸಮಯದಿಂದ ಎಲ್ಲಿ ಜನ ಅತ್ಯಂತ ಕಷ್ಟಕಾರ್ಪಣ್ಯಗಳಿಂದ ಜರ್ಜರಿತರಾಗಿದ್ದಾರೋ, ಎಡೆ ಬಿಡದೆ ಭಗವಂತನನ್ನು ಸರಳವಾದ ವ್ಯಾಕುಲತೆಯಿಂದ, 'ಪ್ರಭು, ಇನ್ನು ಹೀಗೆ ಮಾಡಬೇಡ; ನಮ್ಮ ದುಃಖ, ಸಂಕಟಗಳನ್ನು ದೂರ ಮಾಡು, ನಮಗೆ ದರ್ಶನ ನೀಡು' ಎನ್ನುತ್ತಾ ಸಮಸ್ತ ಕರ್ಮಫಲ ಗಳನ್ನು ಆತನ ಚರಣಗಳಿಗೆ ಸಮರ್ಪಿಸುವರೊ, ಅಥವಾ ಧರ್ಮ ಗ್ಲಾನಿಯನ್ನು ನೋಡಿ ಸಾಧಕರು ಹಗಲೂರಾತ್ರಿ ಆತನನ್ನು, 'ಪ್ರಭು, ಧರ್ಮಸ್ಥಾಪನೆ ಮಾಡಲು ಬಾ' ಎಂದು ಪ್ರಾರ್ಥಿಸುವರೊ, ಆಗ ಕಾಲ ಪರಿಪಕ್ವವಾಗಿದ್ದರೆ, ಜೀವಿಗಳ ಸಂಚಿತ ಹಾಗೂ ಸಮರ್ಪಿತ ಕರ್ಮಫಲವನ್ನು ಅನುಭವಿಸಲು ಹಾಗೂ ಧರ್ಮಸ್ಥಾಪನೆಮಾಡಲು ಆತನು ಬರುವನು. ಜೀವಿಗಳ ಉದ್ಧಾರಕ್ಕಾಗಿ ಆತ ಬರುತ್ತಾನೆ, ಮತ್ತಾವ ಉದ್ದೇಶದಿಂದಲೂ ಅಲ್ಲ. ಆತ್ಮಜ್ಞಾನ ನೀಡಲು, ಸಂಸಾರ ಮಾಯೆಯನ್ನು ಕಳೆಯಲು, ಜನ್ಮಮೃತ್ಯುಗಳಿಂದ ಬಿಡಿಸಲು ಆತ ಬರುತ್ತಾನೆ.

''ಜೀವಿಗಳ ಕರ್ಮಫಲಗಳನ್ನು ಆತನು ಅನುಭವಿಸಬೇಕು. ಆದ್ದರಿಂದಲೇ ಅವತಾರಗಳ ಜೀವನದಲ್ಲಿ ಹುಟ್ಟಿದಂದಿನಿಂದ ಸಾವಿನವರೆಗೂ ಅಷ್ಟೊಂದು ದುಃಖ, ಸಂಕಟಗಳನ್ನು ಅನುಭವಿಸ ಬೇಕಾಗುವುದು. ಆತನಿಗೆ ತನ್ನದೇ ಆದ ಯಾವ ಕರ್ಮವೂ ಇಲ್ಲ; ಕರ್ಮಫಲಗಳೂ ಇಲ್ಲ. ಅವತಾರಪುರುಷನನ್ನು ಪ್ರೀತಿಸಲು ಯಾರು ಧೈರ್ಯಮಾಡುತ್ತಾರೋ, ಅವರಿಗೂ ಹೀಗೆ ಸ್ವಲ್ಪಮಟ್ಟಿಗೆ ಕರ್ಮಫಲಗಳ ಅನುಭವವಾಗುವುದು. ಪ್ರೀತಿಸಬೇಕಾದರೆ ದುಃಖ, ಕಷ್ಟಗಳ ಭಾರವನ್ನೂ ತೆಗೆದುಕೊಳ್ಳಬೇಕು. ಮಹಿಳೆಯರಿಗೆ ಹೆಚ್ಚು ಭಕ್ತಿ, ಹೆಚ್ಚು ನಿಷ್ಠೆ ಹಾಗೂ ವಿಶ್ವಾಸ.

''ಕಮಲಾ ನೆಹರು, ಜವಹರಲಾಲ್‌ರಿಗೆ ತಿಳಿಯದಂತೆ ಜಪ ಮಾಡುತ್ತಿದ್ದಳು, ಅಳುತ್ತಿದ್ದಳು. ಅಣ್ಣ (ಮಹಾಪುರುಷ್ ಮಹಾ ರಾಜ್, ಸ್ವಾಮಿ ಶಿವಾನಂದರು) ಅಸ್ವಸ್ಥರಾಗಿದ್ದಾಗ ಆಕೆಯನ್ನು ನೋಡಿದ್ದೆ, ಅವಳು ರೋಗಗ್ರಸ್ತಳಾಗಿದ್ದಳು, ಆದರೆ ಎಂಥ ನಗು ಮುಖ! ಹೇಳುತ್ತಿದ್ದಳು, 'ಬಹಳ ಕಷ್ಟವಾಗುತ್ತಿದೆ, ಅಳುವುದಕ್ಕೆ ಸಾಧ್ಯವಾಗುತ್ತಿಲ್ಲ.' ನಾನೆಂದೆ, 'ಠಾಕೂರರ ಮಂದಿರಕ್ಕೆ ಹೋಗು, ಠಾಕೂರರು ನಿನ್ನ ಇಚ್ಛೆಯನ್ನು ಪೂರೈಸುವರು' ಅಂತ. ಹೊರಟು ಹೋಗುವ ಮುನ್ನ ಮತ್ತೆ ಬಂದು ಪ್ರಣಾಮ ಮಾಡಿದಳು. ಅವಳ ಎರಡೂ ಕಣ್ಣುಗಳು ದಾಸವಾಳದ ಹೂವಿನಂತೆ ಕೆಂಪಾಗಿದ್ದವು!''

ಒಂದು ದಿನ ಮಾತಿನ ನಡುವೆ ಬಾಬಾ ಹೇಳತೊಡಗಿದರು: ''ನಫರ್ ಕುಂಡು ಅವರ ಸ್ಮಾರಕ ಸಭೆಗೆ ಶರತ್ ಮಹಾರಾಜರೊಂದಿಗೆ ನಾನು ಹೋಗಿದ್ದೆ. ಕೊನೆಗೆ ನಾನೂ ಮಾತನಾಡಬೇಕಾಯಿತು. ಎಲ್ಲರೂ ಸರ್ ಫಿಲಿಪ್ ಸಿಡ್ನಿ ಮುಂತಾದವರ ದೃಷ್ಟಾಂತಗಳನ್ನು

ಕೊಡುತ್ತಿದ್ದರು. ನನಗನ್ನಿಸಿತು, 'ಇದೇಕೆ? ನಮ್ಮ ದೇಶದಲ್ಲೇ ಆತ್ಮ ತ್ಯಾಗ ಮಾಡಿದ ಮಹಾಪುರುಷರಾರೂ ಇಲ್ಲವೆ?' ಅಂತ. ನಾನು ದಧೀಚಿಯ ಉದಾಹರಣೆಯನ್ನು ಕೊಟ್ಟೆ. 'ಇದು ತುಚ್ಛವಾದ ಎಲುಬು, ಮಾಂಸಗಳಿಂದ ಕೂಡಿದ ದೇಹ. ಇದು ನಿಜವಾಗಿಯೂ ನಶ್ವರವೇ; ನರಿ, ನಾಯಿಗಳು ತಿಂದುಹೋಗುವಂಥದು. ಇದರಿಂದ ಯಾರಿಗಾದರೂ ಉಪಕಾರವಾಗುವುದಾದರೆ ಆಗಲಿ. ದೇವತೆಗಳೂ ಮನುಷ್ಯರಿಂದ ತ್ಯಾಗವನ್ನು ನಿರೀಕ್ಷಿಸುತ್ತಾರೆ.' *(ಶ್ರೀಮದ್ಭಾಗವತ, ೬.೧೦.೯-೧೦).*

''ನನ್ನ ಲೆಕ್ಚರ್ ಕೇಳಿ ಶರತ್ ಮಹಾರಾಜರು, 'ಸೋದರ, ನಿನ್ನನ್ನು ಇನ್ನು ಮುರ್ಶಿದಾಬಾದಿಗೆ ಕಳಿಸುವುದಿಲ್ಲ. ಇಲ್ಲೇ ನಮಗೆ ಬೇಕಾದಷ್ಟು ಕೆಲಸವಿದೆ!' ಎಂದರು. ಕೊನೆಗೆ ನಾನು ಓಡಿ ಬರಬೇಕಾಯಿತು.

'' 'ಪರೋಪಕಾರ' ಎಂದೇಕೆ ಹೇಳುತ್ತಾರೆ? ಪರರು ಯಾರು? ಎಲ್ಲರೂ ನಮ್ಮವರೆ. ಭಾಗವತದಲ್ಲಿರುವುದು 'ಉಪಕಾರ' ಎಂದು ಮಾತ್ರ . 'ಪರಹಿತವ್ರತ' ಎಂದೇಕೆ ಹೇಳುವುದೇಕೆ? ಅದು 'ಲೋಕ ಹಿತವ್ರತ' ಎಂದಾಗಬೇಕು.''

ಈಗ ಅವರಿಗೆ 'ಸ್ಮೃತಿಕಥೆ'ಯಲ್ಲಿ ಒಂದೆಡೆ 'ಪರದುಃಖಕಾತರ' ಎಂದು ಬರೆದುದು ನೆನಪಿಗೆ ಬಂತು. ಅದಕ್ಕಾಗಿಯೇ ಹೇಳಿದರು, '' 'ಪರದುಃಖಕಾತರ' ಎಂಬ ಶಬ್ದವನ್ನು ಹೊಡೆದು, 'ಲೋಕಹಿತ ಕಾತರ' ಎಂದು ತಿದ್ದು. ಪರ-ಉಪಕಾರ ಎಂದರೆ ಯಾರಿಗೆ ಉಪ ಕಾರ? ಓದಿಲ್ಲವೆ? ನಮಗೇ ಉಪಕಾರ. ಇದೇ ಸ್ವಾಮೀಜಿಯವರ ಕರ್ಮಯೋಗ - ಸೇವಾಧರ್ಮ.

''ಯುಧಿಷ್ಠಿರನ ಅಶ್ವಮೇಧ ಯಜ್ಞದಲ್ಲಿ 'ಚಿನ್ನದ ಮುಂಗುಸಿಯ ಕತೆ'ಯು ತ್ಯಾಗ ಹಾಗೂ ಸೇವೆಯೇ ಸರ್ವಶ್ರೇಷ್ಠ ಧರ್ಮ ಎಂಬುದನ್ನು ದೃಢಪಡಿಸಿದೆ. ಸ್ವಾರ್ಥವನ್ನು ತ್ಯಜಿಸಿ ಆತ್ಮ ಬುದ್ಧಿಯಲ್ಲಿ ಎಲ್ಲರ ಸೇವೆ ಮಾಡಬೇಕು. ದಯೆ ತೋರುವುದಲ್ಲ, ಇದೇ ಕರ್ಮಯೋಗ, ಇದಕ್ಕೇ 'ಸೇವಾಧರ್ಮ'ವೆನ್ನುವುದು. ಮಾರ್ಗ ಹಾಗೂ ಗುರಿ ಎರಡೂ ಒಂದೇ. ಸೇವೆಯಿಂದ ಚಿತ್ತಶುದ್ಧಿ, ಸೇವೆಯಿಂದ ಹೃದಯ ವಿಶಾಲವಾಗುವುದು, ಸೇವೆಯಿಂದ ಸರ್ವರಲ್ಲಿ ಆತ್ಮದರ್ಶನವುಂಟಾಗುವುದು.

''ಆತ್ಮಜ್ಞಾನವಾದಾಗ ವಿಶ್ವಪ್ರೇಮವುಂಟಾಗುವುದು. ಈಗೀಗ ವಿಶ್ವಪ್ರೇಮದ ಬಗ್ಗೆ ಎಲ್ಲರೂ ಮಾತನಾಡುತ್ತಾರೆ! ನಿಜವಾಗಿಯೂ ಆತ್ಮಜ್ಞಾನದ ನಂತರವೇ ವಿಶ್ವಪ್ರೇಮ ಬರುತ್ತದೆ. ಆಗ 'ಬ್ರಹ್ಮನಿಂದ ಹಿಡಿದು ಕೀಟ, ಪರಮಾಣುಗಳವರೆಗೆ ಎಲ್ಲವೂ ಪ್ರೇಮಮಯ. ಯಾರು ಜೀವರನ್ನು ಪ್ರೀತಿಸುತ್ತಾರೋ ಅವರು ಈಶ್ವರನ ಸೇವೆಯನ್ನೇ ಮಾಡುತ್ತಾರೆ' ಎಂಬ ಸ್ವಾಮೀಜಿ ಮಾತು ಅರ್ಥವಾಗುತ್ತದೆ. ಜೀವ ಸೇವೆಯೇ ಶಿವಸೇವೆ. ಆಗ ಜೀವರು ಯಾರು? ಎಲ್ಲರೂ ಶಿವನೇ.''

**ನವಂಬರ್ ೧೯೩೭:** ಈ ಸಮಯದಲ್ಲಿ ಮಿಸ್ಟರ್ ಫಿಲಿಪ್ ಎಂಬ ಒಬ್ಬ ಗಡ್ಡಧಾರಿ ಅಮೆರಿಕನ್ ಬಂದಿದ್ದಾನೆ. ಆತ ಮೂಲತಃ ಆಸ್ತಿಯಾದವನು; ಬಹಳ ಸಾಹಸಿಗನಾದ ವಿಮಾನ ಚಾಲಕ. ಒಂದನೆಯ ಮಹಾಯುದ್ಧದಲ್ಲಿ ಅನೇಕ ಸಲ ಅಟ್ಲಾಂಟಿಕ್ ದಾಟಿದ್ದಾನೆ. ಯುದ್ಧ ಕೊನೆಗೊಂಡ ಮೇಲೆ ಅಮೇರಿಕಾಗೆ ಹೋಗಿದ್ದ. ತನ್ನ ಪತ್ನಿಯ ಪ್ರಭಾವದಿಂದ ವೇದಾಂತ ವಿಚಾರಗಳ ಪರಿಚಯವಾಗಿ, ಸ್ವಾಮಿ ಪರಮಾನಂದರ ಆಶ್ರಮ ಸೇರಿದ್ದಾನೆ. ಕ್ಯಾಲಿಫೋರ್ನಿಯಾದ ಅಣೆಕಟ್ಟು ಒಡೆದು, ಅದರ ಪ್ರವಾಹದಲ್ಲಿ ಆತನ ಪತ್ನಿ ಕೊಚ್ಚಿಕೊಂಡು ಹೋದಳು. ಅನಂತರ ಆಧ್ಯಾತ್ಮಿಕ ಬೆಳಕನ್ನರಸುತ್ತ ಅವನು ಭಾರತಕ್ಕೆ ಬಂದ. ಈಗ ಬೇಲೂರು ಮಠದಲ್ಲಿದ್ದಾನೆ.

ಮಿಸ್ ಮೆಕ್ಲೌಡ್ ಅವನನ್ನು ಸಾರಗಾಛಿಗೆ ಕಳುಹಿಸಿಕೊಟ್ಟಳು. ಸಂಜೆ ಮಿ.ಫಿಲಿಪ್ ಬಂದು ತಲುಪಿದ ಕೂಡಲೇ ಅವನು ಮೊಣಕಾಲೂರಿ ಸ್ವಾಮಿ ಅಖಂಡಾನಂದರಿಗೆ ಗೌರವ ಸೂಚಿಸಿದಾಗ, ಬಾಬಾ ಆಶ್ರಮದ ಒಬ್ಬ ಬ್ರಹ್ಮಚಾರಿಯನ್ನು ತೋರಿಸುತ್ತ ಅವನಿಗೆ ಹೇಳಿದರು, ''He is your brother, he will serve you. Yes.. privilege of service. Everyone is my Atman. When I serve others, I serve myself (ಆತನು ನಿನ್ನ ಸೋದರ, ನಿನ್ನ ಸೇವೆಯನ್ನು ಮಾಡುವನು. ಹೌದು ಸೇವೆಯೊಂದು ಸುಯೋಗವೆ! ಎಲ್ಲರೂ ನನ್ನ ಆತ್ಮವೇ. ಇತರರ ಸೇವೆಯನ್ನು ಮಾಡುವಾಗ, ನನ್ನ ಆತ್ಮದ ಸೇವೆಯೇ ಆಗುತ್ತದೆ)'' ಫಿಲಿಪ್ ತನ್ನ ಜೀವನದ ವೃತ್ತಾಂತವನ್ನು ಸಂಕ್ಷಿಪ್ತವಾಗಿ ವಿವರಿಸಿದಾಗ ಅವನ ತಲೆಯ ಹಿಂಭಾಗವನ್ನು ನೇವರಿಸುತ್ತ - ಬಾಬಾ ಅದೇನು ಕಂಡರೋ- ತಮ್ಮ ಉಡುಗೆಯನ್ನು ತೋರಿಸುತ್ತಾ, '' Do you like this – the garment of renunciation? You like it! You are a born tyagi. You are Self (ನಿನಗೆ ತ್ಯಾಗದ ಸಂಕೇತವಾದ ಈ ವಸ್ತ್ರ ಇಷ್ಟವೇ? ಹೌದು ನಿನಗಿದು ಇಷ್ಟವಾಗಿದೆ! ನೀನು ಹುಟ್ಟಿನಿಂದಲೇ ತ್ಯಾಗಿ. ನೀನು ಆತ್ಮ)'' ಎಂದರು.

ಆಗ ಫಿಲಿಪ್, ಹೇಗೆ ತಾನು ೪೦ ವರ್ಷ ವಯಸ್ಸಿನಲ್ಲಿದ್ದಾಗ ೫೦ ವರ್ಷದ ಒಬ್ಬಾಕೆಯನ್ನು ವಿವಾಹವಾಗಿ, ಅವಳ ಸಹವಾಸದಿಂದ ತನ್ನ ಜೀವನದಲ್ಲಿ ಹೊಸ ದಾರಿಯನ್ನು ಕಂಡುಕೊಂಡೆ, ಎಂಬುದನ್ನು ಹೇಳತೊಡಗಿದ. ಪ್ರವಾಹದ ನೀರಿನಲ್ಲಿ ತೇಲುತ್ತಿದ್ದ ತನ್ನ ಪತ್ನಿಯ ಮೃತದೇಹದ ಕೈಯಲ್ಲಿ ಚಿಕ್ಕದೊಂದು ಪುಸ್ತಕವಿತ್ತು- 'Light on Life.' ಆ ಪುಸ್ತಕದಲ್ಲಿ ಇನ್ನೂ ನೀರಿನ ಕಲೆಯಿತ್ತು. ಅದನ್ನು ತೋರಿಸುತ್ತ ತೋರಿಸುತ್ತ ಅವನು ಅಕ್ಷರಶಃ ಕಂಬನಿಗರೆಯ ತೊಡಗಿದ. ಕ್ರೈಸ್ತಧರ್ಮದ ಸಾಹಿತ್ಯ ತನಗೆ ಶಾಂತಿ ನೀಡುತ್ತಿಲ್ಲವೆಂದೂ, ತಾನು ಸುಮಾರು ೮-೧೦ ಸಾವಿರ ಪುಸ್ತಕಗಳನ್ನು ಓದಿರುವುದಾಗಿಯೂ ಆತ ಹೇಳಿದ. ಈ ಪುಸ್ತಕ ಅವನಿಗೆ ಬೆಳಕನ್ನು ನೀಡಿದೆಯಾದರೂ, ಈಗ ಆತನಿಗೆ ಬೇಕಾಗಿರುವುದು ಶಾಂತಿ. ವೇದಾಂತದ ಶಾಂತ, ಶುಭ್ರ ಬೆಳಕಿನಲ್ಲಿ ಆತ ನವ ಜೀವನವನ್ನು ಪಡೆಯುವ ಆಸೆಯನ್ನು ವ್ಯಕ್ತಪಡಿಸಿದ.

*(ಮುಂದುವರಿಯುವುದು)*

**ಸ್ವಾಮಿ ನಿತ್ಯಸ್ಥಾನಂದ**




# ಗುಣತ್ರಯ

ಹಿಂದಿನ ಅಧ್ಯಾಯದಲ್ಲಿ ಪ್ರಕೃತಿಯ ಬಗ್ಗೆ ಹೇಳಿದ್ದಾಯಿತು. ಈ ಅಧ್ಯಾಯದಲ್ಲಿ ಪ್ರಕೃತಿಯ ಮೂರು ಗುಣಗಳ ಬಗ್ಗೆ ಹೇಳಲಾಗಿದೆ. ಸತ್ತ್ವರಜಸ್ತಮೋಗುಣಗಳು ವ್ಯಕ್ತ ಜಗತ್ತಿನ ಎಲ್ಲ ವಿಷಯಗಳಲ್ಲೂ ಕಂಡುಬರುವುದರಿಂದ, ಯಾವುದು ಕಾರ್ಯದಲ್ಲಿದೆಯೋ ಅದು ಕಾರಣದಲ್ಲಿಯೂ ಇರಬೇಕೆಂಬ ನಿಯಮದ ಪ್ರಕಾರ, ಜಗತ್ತಿಗೆ ಕಾರಣವಾದ ಪ್ರಕೃತಿಯಲ್ಲಿಯೇ ಈ ಮೂರು ಗುಣಗಳು ಇರಬೇಕು ಎಂಬುದು ತಿಳಿದು ಬರುತ್ತದೆ. ಪ್ರಕೃತಿಯು ಒಂದು ದ್ರವ್ಯ ಮತ್ತು ಸತ್ತ್ವಾದಿಗಳು ಅದರ ಮೂರು ಗುಣಗಳು (qualities) – ಈ ಅರ್ಥದಲ್ಲಿ ಅವು ಪ್ರಕೃತಿಯ ಗುಣಗಳಲ್ಲಿ, ಈ ಮೂರು ಗುಣಗಳು ಪ್ರಕೃತಿಯ ಘಟಕಗಳು, ಈ ಮೂರೂ ಸೇರಿ ಪ್ರಕೃತಿಯೆನಿಸುತ್ತದೆ – ಈ ಮೂರರ ಒಟ್ಟು ಮೊತ್ತವೇ ಪ್ರಕೃತಿ. ಮಣ್ಣಿನಿಂದಾದ ಮಡಕೆಯಲ್ಲಿ ಮಣ್ಣಿನ ಗುಣಗಳು ಆವಶ್ಯಕವಾಗಿ ಇರುವಂತೆ, ನೂಲಿನಿಂದಾದ ಬಟ್ಟೆಯಲ್ಲಿ ನೂಲಿನ ಬಣ್ಣ ಇದ್ದೇ ಇರುವಂತೆ, ಪ್ರಕೃತಿಯ ಉತ್ಪನ್ನವಾದ ಜಗತ್ತಿನಾದ್ಯಂತ ಈ ಮೂರು ಗುಣಗಳು ಕಂಡುಬರುತ್ತವೆ.

'ಗುಣ' ಎಂಬ ಶಬ್ದಕ್ಕೆ ಮೂರು ಅರ್ಥಗಳಿವೆ ಎಂದು ವಿದ್ವಾಂಸರು ಹೇಳುತ್ತಾರೆ. 'ಗುಣ' ಎಂದರೆ ಗೌಣವಾದುದು ಎಂಬುದು ಒಂದು ಅರ್ಥ. ಈ ಗುಣಗಳೆಲ್ಲವೂ ವ್ಯಕ್ತಜಗತ್ತಿಗೆ, ದೇಹೇಂದ್ರಿಯ ಮನಸ್ಸುಗಳಿಗೆ ಸಂಬಂಧಪಟ್ಟವುಗಳು, ಮತ್ತು ಇವು ಸಾಪೇಕ್ಷವಾದವುಗಳು. ಸಾಧಕನು ಈ ಮೂರು ಗುಣಗಳನ್ನು ಮೀರಿ ಪರಮ ಶ್ರೇಷ್ಠ ಪುರುಷನೊಡನೆ ಒಂದಾಗಬೇಕು. ಈ ದೃಷ್ಟಿಯಿಂದ ಸತ್ತ್ವರಜಸ್ತಮೋಗುಣಗಳು ಗೌಣ. ಇನ್ನೊಂದು ಅರ್ಥದಲ್ಲಿ ಗುಣವೆಂದರೆ ಹಗ್ಗ. ಹಗ್ಗದಿಂದ ಕಟ್ಟಬಹುದು. ಹಾಗೆಯೇ ತ್ರಿಗುಣಾತ್ಮಕ ಹಗ್ಗದಿಂದ ಜೀವಿಯು ಈ ವ್ಯಕ್ತಿತ್ವವೆಂಬ ಕಂಬಕ್ಕೆ ಕಟ್ಟಲ್ಪಟ್ಟಿದ್ದಾನೆ. ಮೂರನೆಯ ಅರ್ಥ ವಿಶಿಷ್ಟ ಲಕ್ಷಣಗಳು ಅಥವಾ ಧರ್ಮ – ಸುಡುವುದು ಅಗ್ನಿಯ ಧರ್ಮ ಎನ್ನುವಂತೆ. ಈ ಮೂರು ಗುಣಗಳೇ ಒಟ್ಟು ಜಗತ್ತಿನ ಧರ್ಮ. ಧರ್ಮದ (religion) ಉದ್ದೇಶವೇ ಈ ಧರ್ಮಗಳನ್ನು ಮೀರಿಹೋಗುವುದು.

ಶ್ವೇತಾಶ್ವತರ ಉಪನಿಷತ್ತಿನಲ್ಲಿ ಈ ಗುಣಗಳ ಪ್ರಸ್ತಾಪವಿದೆ:

**ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ**
**ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ ।**
**ಅಜೋ ಹ್ಯೇಕೋ ಜಷಮಾಣೋಽನುಶೇತೇ**
**ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ ॥** *(೪.೫)*

ತನ್ನಂತೆಯೇ ಇರುವ ಅನೇಕ ಮರಿಗಳನ್ನು ಸೃಷ್ಟಿಸುತ್ತಿರುವ ಹಾಗೂ ಕೆಂಪು, ಬಿಳಿ ಮತ್ತು ಕಪ್ಪು ಬಣ್ಣದಿಂದ ಕೂಡಿರುವ ಆಡೊಂದನ್ನು ಹೋತವು ಭೋಗಿಸುತ್ತಿರುವುದು. ಇನ್ನೊಂದು ಹೋತವು ಈ ಆಡನ್ನು ಭೋಗಿಸಿದ ಮೇಲೆ ತ್ಯಜಿಸುತ್ತದೆ. 'ಅಜಾ' ಎಂಬ ಸ್ತ್ರೀಲಿಂಗ ಶಬ್ದವು ಪ್ರಕೃತಿಯನ್ನು ಸೂಚಿಸುತ್ತದೆ. ಈ ಶಬ್ದಕ್ಕೆ ಎರಡು ಅರ್ಥಗಳಿವೆ – ಆಡು ಮತ್ತು ಅನಾದಿ, ಹುಟ್ಟಿಲ್ಲದಿರುವುದು. ಪ್ರಕೃತಿಯೂ ಅನಾದಿ, ಮತ್ತು ಅದು ತ್ರಿಗುಣಾತ್ಮಕವಾದುದು – ಮೂರು ಬಣ್ಣಗಳು ಇದನ್ನು ಸೂಚಿಸುತ್ತವೆ. ಅದರಂತೆಯೇ ಇರುವ ಅದರ ಮರಿಗಳು ಪ್ರಕೃತಿಯಿಂದ ಉತ್ಪನ್ನವಾದ ತ್ರಿಗುಣಾತ್ಮಕ ಜಗತ್ತನ್ನು ಸೂಚಿಸುತ್ತದೆ. ಪುಲ್ಲಿಂಗ ಅಜವು ಪ್ರಕೃತಿಯ ಸುಖದುಃಖಗಳನ್ನು ಭೋಗಿಸುತ್ತಿರುವ ಸಾಮಾನ್ಯ ಜೀವಾತ್ಮನನ್ನು ಸೂಚಿಸುತ್ತದೆ. ಇನ್ನೊಂದು ಅಜವು ಭೋಗವನ್ನು ತ್ಯಜಿಸಿದ ಮುಕ್ತ ಪುರುಷನನ್ನು ಸೂಚಿಸುತ್ತದೆ.

ಪ್ರಕೃತಿಯ ಮೂರು ಗುಣಗಳನ್ನು ಸೂಚಿಸುವ ವಿಚಾರ ಇತ್ತೀಚೆಗಿನ ಭೌತವಿಜ್ಞಾನಕ್ಷೇತ್ರದಲ್ಲಿಯೂ ಕಂಡುಬರುವುದು ಸೋಜಿಗವೆನಿಸುತ್ತದೆ. ಪರಮಾಣುವಿನ ಉಪಕಣಗಳಾದ ಪ್ರೋಟಾನ್, ನ್ಯೂಟ್ರಾನ್ ಮುಂತಾದವುಗಳನ್ನು ಇನ್ನೂ ಸೂಕ್ಷ್ಮ ಕಣಗಳಾಗಿ ವಿಭಾಗಿಸಿ ಅವುಗಳನ್ನು ಕ್ವಾರ್ಕ್ಸ್ (quarks) ಎಂದು ಕರೆಯುತ್ತಾರೆ. ಮುರ್ರೇ ಗೆಲ್‌ಮನ್ ಎಂಬ ವಿಜ್ಞಾನಿಯ ಪ್ರಕಾರ ಈ ಕ್ವಾರ್ಕ್ಸ್‌ಗಳು ಮೂರು

ರೂಪಗಳಲ್ಲಿ ಕಾಣಿಸಿಕೊಳ್ಳಬಹುದು ಮತ್ತು ಈ ರೂಪಗಳನ್ನು ಕೆಂಪು, ಬಿಳಿ ಮತ್ತು ನೀಲಿ ಎಂದು ಹೆಸರಿಸಲಾಗಿದೆ. ಕೆಂಪು ಬಣ್ಣವು ರಜೋಗುಣವನ್ನೂ, ಬಿಳಿ ಸತ್ತ್ವಗುಣವನ್ನೂ, ನೀಲಿ ಅಥವಾ ಕಪ್ಪು ತಮೋಗುಣವನ್ನೂ ಸೂಚಿಸುತ್ತವೆ. ರಜೋಗುಣದ ಆಧಿಕ್ಯದಿಂದ ಕೋಪ ನೆತ್ತಿಗೇರಿದಾಗ ಮುಖ 'ಕೆಂಪಾ'ಗುತ್ತದೆ! ತಮಸ್ಸಿನ ಪ್ರಭಾವದಿಂದ ತೀವ್ರ ದುಗುಡತೆಯುಂಟಾದಾಗ ಮುಖ 'ಕಪ್ಪಾ' ಗುತ್ತದೆ. ಸತ್ತ್ವಗುಣದ ಆಧಿಕ್ಯದಿಂದ ಮುಖ ಪ್ರಕಾಶಮಾನವಾಗಿ 'ಬೆಳ್ಳ'ಗಾಗುತ್ತದೆ – ವ್ಯಕ್ತಿಯು ಕಪ್ಪಾಗಿದ್ದರೂ ಕೂಡ.

ಸತ್ತ್ವವೆಂದರೆ ಶಾಬ್ದಿಕ ಅರ್ಥ 'ಇರುವಿಕೆ' ಎಂದು. ಈ ಪ್ರಪಂಚದಲ್ಲಿ ಕಂಡುಬರುವ ಎಲ್ಲ ವಸ್ತು ಮತ್ತು ಜೀವಿಗಳಲ್ಲೂ ಇರುವಿಕೆಯು ಎದ್ದು ಕಾಣುತ್ತದೆ. ಮೊದಲು ನಮ್ಮ ಗಮನಕ್ಕೆ ಬರುವುದು ವಸ್ತುಗಳ ಇರುವಿಕೆ. ಸತ್ತ್ವ ಎಂಬ ಶಬ್ದವನ್ನು ವಸ್ತುವಿನ ಸಾರ ಅಥವಾ ಅದರ ಮುಖ್ಯಾಂಶ ಎಂಬ ಅರ್ಥದಲ್ಲಿಯೂ ಉಪಯೋಗಿಸುತ್ತಾರೆ. ಉದಾಹರಣೆಗೆ ಅಗ್ನಿಯ ಸತ್ತ್ವವೇ ಅದರ ಸುಡುವಿಕೆ. ಅದು ಹೊರಟುಹೋದರೆ ಅದು ಅಗ್ನಿಯೇ ಅಲ್ಲ. ಆದ್ದರಿಂದ ಸತ್ತ್ವ ವಸ್ತುವಿನ ಸಾರ ಅಂಶ, ಅದಿಲ್ಲದಿದ್ದರೆ ಅದಕ್ಕೆ ಇರುವಿಕೆಯೇ ಇಲ್ಲ. ಮತ್ತು ಎಲ್ಲ ವಸ್ತುಗಳಲ್ಲಿಯೂ ಚಲನೆ ಇದೆ – ಈ ಜಗತ್ತಿನಲ್ಲಿ ಎಲ್ಲವೂ ಚಲನಾತ್ಮಕವಾದುದು, ಕ್ರಿಯಾಶೀಲವಾದುದು. ನಿಷ್ಕ್ರಿಯವೆಂಬುದು ಯಾವುದೂ ಇಲ್ಲ. ಯಾವುದೇ ವಸ್ತುವನ್ನು ನಾವು ವಿಶ್ಲೇಷಿಸಿ ನೋಡಿದರೂ ಅದರ ಪ್ರತಿಯೊಂದು ಕಣವೂ ನಿರಂತರ ಚಟುವಟಿಕೆಯಲ್ಲಿ ತೊಡಗಿರುವುದು ಕಂಡುಬರುತ್ತದೆ. ಭೂಮಿಯಲ್ಲಿರುವ ಎಲ್ಲವೂ ಚಲಿಸುತ್ತಿವೆ. ಭೂಮಿಯೂ, ಗ್ರಹಗಳೂ, ಸೂರ್ಯ ನಕ್ಷತ್ರಗಳೂ ಗ್ಯಾಲಕ್ಸಿಗಳೂ ಚಲಿಸುತ್ತಿವೆ. ಈ ಚಟುವಟಿಕೆಯೇ ವಸ್ತುವಿನ ರಾಜಸಿಕ ಅಂಶ. ಇದಲ್ಲದೆ ಪ್ರತಿಯೊಂದರಲ್ಲೂ ಜಡತ್ವ ಕಂಡುಬರುತ್ತದೆ. ಈ ಜಡತ್ವದಿಂದಾಗಿ ಚಲನೆಗೆ ಕಡಿವಾಣ ಹಾಕಿದಂತಾಗುತ್ತದೆ. ಇಲ್ಲದಿದ್ದರೆ ಎಲ್ಲವೂ ಛಿದ್ರಛಿದ್ರವಾಗುತ್ತಿದ್ದವು. ಮನುಷ್ಯನಿಗೂ ಚಟುವಟಿಕೆ ಮತ್ತು ವಿಶ್ರಾಂತಿ ಎರಡೂ ಆವಶ್ಯಕ. ಈ ಎರಡೂ ಅಂಶಗಳ ಸಮತೋಲ ಸ್ಥಿತಿಯೇ ಸತ್ತ್ವಾಂಶ. ಹೀಗೆ ಪ್ರತಿಯೊಂದು ವಸ್ತುವಿನಲ್ಲೂ ಈ ಮೂರು ಗುಣಗಳ ಪಾತ್ರವನ್ನು ನಾವು ಕಾಣುತ್ತೇವೆ.

ಎಲ್ಲ ಬಗೆಯ ಜ್ಞಾನವನ್ನು ಸತ್ತ್ವ ಎಂದು ಕರೆಯಬಹುದು. ಆದ್ದರಿಂದಲೇ ಸತ್ತ್ವವನ್ನು ಪ್ರಕಾಶಾತ್ಮಕವಾದುದು ಎಂದು ಹೇಳಲಾಗಿದೆ. ಇದನ್ನೇ ವಸ್ತುವಿನ ದೃಷ್ಟಿಯಿಂದ ನೋಡಿದರೆ ಪ್ರತಿಯೊಂದರಲ್ಲೂ ಜ್ಞೇಯತ್ವ (knowable) ಇದೆ, ಪ್ರತಿಯೊಂದೂ ನಮ್ಮ ಜ್ಞಾನದೃಷ್ಟಿಗೆ ಪ್ರಕಾಶಿಸುತ್ತದೆ. ಈ ಪ್ರಕಾಶಗುಣ ಸಾತ್ತ್ವಿಕವಾದುದು. ಈ ಜ್ಞಾನವುಂಟಾಗುವುದು ಚಲನೆಯ ಪರಿಣಾಮವಾಗಿ. ವಸ್ತುವಿನ ಚಲನೆಯಿಂದ ಶಬ್ದೋತ್ಪತ್ತಿಯಾಗಿ ನಮಗೆ ಶಬ್ದಜ್ಞಾನವುಂಟಾಗುತ್ತದೆ, ಎಲೆಕ್ಟ್ರಾನ್‌ಗಳ ಚಲನೆಯಿಂದ ಸ್ಪರ್ಶಜ್ಞಾನವುಂಟಾಗುತ್ತದೆ, ಬೆಳಕಿನ ಚಲನೆಯಿಂದ ರೂಪಜ್ಞಾನವುಂಟಾಗುತ್ತದೆ. ಇವಲ್ಲದೆ, ನಮ್ಮೊಳಗೆ ಉಂಟಾಗುವ ನರಗಳ, ಮಿದುಳಿನ ಹಾಗೂ ಮನಸ್ಸಿನ ಚಲನೆಗಳೆಲ್ಲ ಸೇರಿ ಜ್ಞಾನವುಂಟಾಗುತ್ತದೆ. ಹೀಗೆ ರಾಜಸಿಕ ಅಂಶ ಸಾತ್ತ್ವಿಕವಾದ ಜ್ಞಾನಕ್ಕೆ ಕಾರಣವಾಗುತ್ತದೆ. ಎಲ್ಲ ಬಗೆಯ ಅವ್ಯಕ್ತ ಸ್ಥಿತಿ ತಮಸ್ಸು. ಅದು ಎಲ್ಲವನ್ನೂ ಹಿಡಿದಿಟ್ಟುಕೊಳ್ಳುವುದು – ಸುಪ್ತಾವಸ್ಥೆ – ನಮ್ಮ ಅರಿವಿಗೆ ವ್ಯಕ್ತವಾಗದೇ ಇರುವ ಸ್ಥಿತಿ. ಮಾನಸಿಕ ದೃಷ್ಟಿಯಿಂದ ನೋಡಿದರೆ ಇದು ಸುಪ್ತ ಮನಸ್ಸಿನ ಸ್ಥಿತಿ ಎಂದು ಹೇಳಬಹುದು. ನಮ್ಮ ಅರಿವಿಗೆ ಬರದ ಈ ಅಪ್ರಜ್ಞಾಮನಸ್ಸನ್ನು ತಾಮಸಿಕ ಸ್ಥಿತಿ ಎಂದು ಕರೆಯಬಹುದು, ಅರಿವಿಗೆ ಬರುವ ಪ್ರಜ್ಞಾಮನಸ್ಸು ಸತ್ತ್ವ ಮತ್ತು ಮನಸ್ಸಿನ ಚಲನೆ ರಜಸ್ಸು. ವಸ್ತುಗಳಲ್ಲಿಯೂ ನಮ್ಮ ಅರಿವಿಗೆ ಬರದೆ ಇರುವ ಅಂಶಗಳೇ ಅತ್ಯಧಿಕ (dark-matter.) ಒಂದು ವಸ್ತುವಿನ ಅರಿವಾಗುವುದು (ಸತ್ತ್ವ) ಚಲನೆಯಿಂದ (ರಜಸ್) ಮತ್ತು ಚಲನೆಗೆ ಸುಪ್ತಶಕ್ತಿ (ತಮಸ್) ಬೇಕು. ಆದ್ದರಿಂದ ಮೂರರಲ್ಲೂ ಪರಸ್ಪರ ಸಂಪರ್ಕವಿದೆ. ಯೋಗಶಾಸ್ತ್ರದಲ್ಲಿ ಈ ಮೂರು ಗುಣಗಳನ್ನು ಕ್ರಮವಾಗಿ ಪ್ರಕಾಶ, ಪ್ರವೃತ್ತಿ ಮತ್ತು ಸ್ಥಿತಿ ಎಂದು ಕರೆದಿರುವುದು. ಈ ದೃಷ್ಟಿಯಿಂದ ತುಂಬ ಔಚಿತ್ಯಪೂರ್ಣವಾಗಿದೆ.

ರಜಸ್ ಶಬ್ದದ ಇನ್ನೊಂದು ಅರ್ಥ ಧೂಳು. ಇದರಿಂದ ವಸ್ತುವು ಸರಿಯಾಗಿ ಕಾಣದಂತಾಗುತ್ತದೆ. ನಿರಂತರ ಚಲನೆಯಿಂದಲೂ ಕೂಡ ವಸ್ತುವಿನ ಹಿಂದಿರುವ ಸತ್ಯವು ಕಾಣದಂತಾಗುತ್ತದೆ – ದೃಶ್ಯಗಳ ಚಲನೆಯಿಂದ ಪರದೆಯು ಕಾಣದಿರುವಂತೆ. ಮನಸ್ಸಿನ ನಿರಂತರ ಚಲನೆಯಿಂದ ಅದರ ಹಿಂದಿರುವ ಆತ್ಮತತ್ತ್ವದ ಅರಿವು ನಮಗೆ ಆಗುವುದಿಲ್ಲ. ಮನಸ್ಸಿನ ಶಾಂತಸ್ಥಿತಿ ಸತ್ತ್ವದ ಪರಿಣಾಮ, ಆಗ ಆತ್ಮತತ್ತ್ವದ ಅರಿವುಂಟಾಗುತ್ತದೆ. ಹಿಂದೆ ತಿಳಿಸಿರುವಂತೆ, ಚಲನೆಯಿಂದ ಜ್ಞಾನವುಂಟಾಗುವುದು. ಆದರೆ ಈ ಜ್ಞಾನವು ವಸ್ತುಗಳಿಗೆ ಸಂಬಂಧಿಸಿದ ನಾಮರೂಪಾತ್ಮಕವಾದ ಸಾಪೇಕ್ಷಿತ ಜ್ಞಾನ – ಅವುಗಳ ಹಿಂದಿರುವ ಆತ್ಯಂತಿಕ ಸತ್ಯವಲ್ಲ. ನಿಜವಾಗಿಯೂ ಈ ಸಾಪೇಕ್ಷಿತ ಜ್ಞಾನವೇ ಹಿಂದಿರುವ ಸತ್ಯವನ್ನು ಮರೆಮಾಚುವುದು – ಸರ್ಪವು ಹಗ್ಗವನ್ನು ಆವರಿಸುವಂತೆ. ಸತ್ತ್ವವು ಸತ್ಯವನ್ನು ಪ್ರಕಾಶಿಸುತ್ತದೆ, ರಜಸ್ಸು ಸತ್ಯವನ್ನು ಮರೆಮಾಚುತ್ತದೆ ಮತ್ತು ತಮಸ್ಸು (ಕತ್ತಲೆ) ವಸ್ತುಗಳ ಸ್ಪಷ್ಟ ಅರಿವೂ ನಮಗೆ ಉಂಟಾಗದಂತೆ ಮಾಡುತ್ತದೆ. *(ನೋಡಿ: ಸ್ವಾಮಿ ಹರಿಹರಾನಂದ ಆರಣ್ಯರ Yoga Philosophy of Patanjali, ಪು. ೧೬೦–೧೬೧)*

ಪ್ರಾಕೃತಿಕವಾದ ಈ ಮೂರು ಗುಣಗಳು ಜೀವಾತ್ಮವನ್ನು ದೇಹದಲ್ಲಿ ಬಂಧಿಸುತ್ತದೆ ಎಂದು ಶ್ರೀಕೃಷ್ಣನು ಹೇಳುತ್ತಾನೆ. ಹೇಗೆ ಬಂಧಿಸುತ್ತವೆ? ವೇದಾಂತದ ಪ್ರಕಾರ ಜೀವಾತ್ಮನು ಚಿದಾಭಾಸ, ಅಂದರೆ ಸತ್ತ್ವಪ್ರಧಾನ ಬುದ್ಧಿಯ ಮೂಲಕ ಪ್ರತಿಬಿಂಬಿತವಾದ ಚಿತ್ ಸ್ವರೂಪನಾದ ಆತ್ಮನ ಬೆಳಕು – ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಂತೆ. ನೀರು ತಿಳಿಯಾಗಿದ್ದು ಪ್ರತಿಬಿಂಬವು ಸ್ಪಷ್ಟವಾಗಿ ಕಾಣುತ್ತಿದ್ದರೆ ಸತ್ತ್ವಾವಸ್ಥೆ, ನೀರು ಚಂಚಲವಾಗಿದ್ದು ಪ್ರತಿಬಿಂಬ ಅಸ್ಪಷ್ಟವಾಗಿ ಕಾಣುತ್ತಿದ್ದರೆ ಅದು ರಾಜಸಿಕ ಸ್ಥಿತಿ, ಮತ್ತು ನೀರು

ಕೊಳೆಯಾಗಿದ್ದು ಪ್ರತಿಬಿಂಬವು ಕಾಣದೆ ಇದ್ದರೆ ತಾಮಸಿಕ ಸ್ಥಿತಿ. ಹೀಗೆಯೇ ಮನಸ್ಸಿನ ಮೂರು ಗುಣಗಳಿಗೆ ಅನುಗುಣವಾಗಿ ನಮ್ಮ ಆತ್ಮನ ಅರಿವಿನಲ್ಲಿ ತಾರತಮ್ಯ ಉಂಟಾಗುತ್ತದೆ. ನಿಜವಾಗಿಯೂ ಆತ್ಮನು ಬಂಧನಕ್ಕೊಳಗಾಗಿಲ್ಲ, ಪ್ರತಿಬಿಂಬವು ಬಂಧನದಲ್ಲಿರುವುದು. ಆದರೆ ಆತ್ಮನು ತನ್ನನ್ನು ತಾನು ಮರೆತು ಪ್ರತಿಬಿಂಬದೊಡನೆ ತಾದಾತ್ಮ್ಯ ಹೊಂದುವುದರಿಂದ ಬಂಧನದ ಅರಿವಾಗುತ್ತದೆ. ಸತ್ತ್ವ ಗುಣದ ಪ್ರಭಾವದಿಂದ ನಮಗೆ ಆತ್ಮನ ಅರಿವು ಸ್ಪಷ್ಟವಾಗುತ್ತದೆ. ಆದರೂ ತ್ರಿಗುಣಾತ್ಮಕವಾದ ದೇಹದ ಬಂಧನದೊಳಗೇ ಇರುತ್ತೇವೆ. ಆದ್ದರಿಂದಲೇ ಶ್ರೀಕೃಷ್ಣನು, ಈ ಮೂರು ಗುಣಗಳು ಜೀವಾತ್ಮನನ್ನು ದೇಹದೊಳಗೆ ಬಂಧಿಸುತ್ತವೆ ಎಂದು ಹೇಳಿರುವುದು.

ಶ್ರೀರಾಮಕೃಷ್ಣರು ಒಂದು ಕಥೆಯ ಮೂಲಕ ಈ ಮೂರು ಗುಣಗಳ ಕ್ರಿಯೆಗಳನ್ನು ಸುಂದರವಾಗಿ ವರ್ಣಿಸುತ್ತಾರೆ. ಒಬ್ಬ ಶ್ರೀಮಂತ ವರ್ತಕನು ಒಂದು ಕಾಡಿನ ಮೂಲಕ ಹೋಗುತ್ತಿದ್ದನು. ಮೂವರು ದರೋಡೆಕೋರರು ಬಂದು ಅವನನ್ನು ಹಿಡಿದು ಅವನಲ್ಲಿದ್ದ ಸಂಪತ್ತನ್ನೆಲ್ಲ ದೋಚಿಕೊಂಡರು. ಒಬ್ಬ ದರೋಡೆಕೋರನು, 'ಇವನನ್ನು ಹೀಗೆಯೇ ಬಿಟ್ಟರೆ ಪೋಲಿಸರಿಗೆ ದೂರು ಹೇಳುತ್ತಾನೆ, ಇಲ್ಲಿಯೇ ಮುಗಿಸಿಬಿಡೋಣ', ಎಂದು ಹೇಳಿದ. 'ಪಾಪ, ಸಾಯಿಸುವುದು ಏಕೆ? ಇಲ್ಲಿಯೇ ಒಂದು ಮರಕ್ಕೆ ಕಟ್ಟಿಹಾಕಿಬಿಡೋಣ', ಎಂದು ಎರಡನೆಯವನು ಹೇಳಿದ. ಮೂರನೆಯವನು, 'ಇವನನ್ನು ಹಾಗೆ ಬಿಟ್ಟುಬಿಡೋಣ. ನಮಗೆ ಬೇಕಾಗಿದ್ದುದು ಸಂಪತ್ತು, ಅದು ನಮಗೆ ಸಿಕ್ಕಿದೆ. ಇನ್ನು ಅವನ ತಂಟೆ ನಮಗೇಕೆ?' ಹೀಗೆ ತೀರ್ಮಾನಿಸಿ ಅವನನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು.

ಸಂಸಾರವೇ ಒಂದು ಕಾಡು. ಕಾಡಿನಲ್ಲಿ ಓಡಾಡುವುದು ಕಷ್ಟವಾಗಿರುವಂತೆ ಸಂಸಾರ ನಿರ್ವಹಣೆಯೂ ಕಷ್ಟ. ಇವನನ್ನು ಮುಗಿಸಿಬಿಡೋಣ ಎಂದು ಹೇಳಿದ ದರೋಡೆಕೋರನು ತಮಸ್ಸಿನ ಪ್ರತಿನಿಧಿ. ತಮಸ್ಸು ಕೊಲ್ಲುತ್ತದೆ – ಅಂದರೆ ಅಜ್ಞಾನದ ಮೂಲಕ ಆಧ್ಯಾತ್ಮಿಕ ವ್ಯಕ್ತಿತ್ವವನ್ನೇ ನಾಶಮಾಡುತ್ತದೆ. ಇವನನ್ನು ಮರಕ್ಕೆ ಕಟ್ಟಿಹಾಕೋಣ ಎಂದು ಹೇಳಿದವನು ರಜೋಗುಣದ ಪ್ರತಿನಿಧಿ. ರಜಸ್ಸು ಕಟ್ಟಿಹಾಕುತ್ತದೆ. ಅಂದರೆ ಅನೇಕ ಆಸೆಗಳಿಂದ ಜೀವನನ್ನು ಬಂಧಿಸುತ್ತದೆ. ಇವನನ್ನು ಹಾಗೆಯೇ ಬಿಟ್ಟುಬಿಡೋಣ ಎಂದು ಸ್ವಲ್ಪ ಉದಾರತೆಯನ್ನು ತೋರಿಸಿದವನು ಸತ್ತ್ವಗುಣದ ಪ್ರತಿನಿಧಿ. ಇದರ ಪ್ರಭಾವದಿಂದ ಆಸೆಗಳ ಬಂಧನ ಕಡಮೆಯಾಗಿ ಆನಂದವುಂಟಾಗುತ್ತದೆ, ಜ್ಞಾನಪ್ರಕಾಶವುಂಟಾಗುತ್ತದೆ, ಮತ್ತು ಇದರಿಂದ ಅಧ್ಯಾತ್ಮದ ಕಡೆಗೆ ಪಯಣಿಸಲು ಸಾಧ್ಯವಾಗುತ್ತದೆ. ಆದರೆ ಈ ಆನಂದದಲ್ಲಿಯೇ ಮಗ್ನವಾಗಿಬಿಟ್ಟರೆ ಅದೂ ಒಂದು ಬಂಧನವೇ. ಆದ್ದರಿಂದ ಈ ಮೂರೂ ಬಂಧಕಾರಿ.

ತಮಸ್ಸಿನಿಂದ ಅಜ್ಞಾನವುಂಟಾಗುತ್ತದೆ ಮತ್ತು ಇದು ಮೋಹಕ್ಕೆ ಕಾರಣವಾಗುತ್ತದೆ – ಎಂದು ಶ್ರೀಕೃಷ್ಣನು ಹೇಳುತ್ತಾನೆ. ಅಜ್ಞಾನದಿಂದಾಗಿ ವಿಷಯವನ್ನು ಯಥಾರ್ಥವಾಗಿ ತಿಳಿಯಲಾಗುವುದಿಲ್ಲ. ಇದರಿಂದಾಗಿ ವ್ಯಕ್ತಿಯು ಮಾಡಬಾರದುದನ್ನು ಮಾಡುತ್ತಾನೆ. ವಸ್ತುವನ್ನು ಅಥವಾ ವಿಷಯವನ್ನು ತಿಳಿಯುವ ಸಾಮರ್ಥ್ಯವೇ ಅವನಿಗೆ ಇರುವುದಿಲ್ಲ. ಇದರಿಂದಾಗಿ ಎಲ್ಲ ವಿಷಯಗಳಲ್ಲಿಯೂ ತನ್ನ ವಿಷಯದಲ್ಲಿಯೂ ತಪ್ಪು ತಿಳುವಳಿಕೆ ಇರುತ್ತದೆ. ಒಳ್ಳೆಯವನು ಕೆಟ್ಟವನಾಗಿಯೂ, ಕೆಟ್ಟವನು ಒಳ್ಳೆಯವನಾಗಿಯೂ ಅವನಿಗೆ ಕಂಡುಬರುತ್ತಾನೆ. ತನ್ನಲ್ಲಿಲ್ಲದ ಸಾಮರ್ಥ್ಯವನ್ನು ಇದೆ ಎಂದು ಭಾವಿಸಿ ಏನೇನೋ ಮಾಡುವುದಕ್ಕೆ ಹೋಗಿ ಅದು ಏನೇನೋ ಆಗಿಬಿಡಬಹುದು. ಹೀಗೆ ಅವನು ಯಾವಾಗಲೂ ಪ್ರಮಾದಕ್ಕೆ ಒಳಗಾಗುತ್ತಾನೆ. ಎಚ್ಚರಿಕೆ ತಪ್ಪಿ ಮಾತನಾಡುವುದು, ವರ್ತಿಸುವುದು, ಪ್ರಮಾದದ ಪರಿಣಾಮ. ನಮ್ಮಲ್ಲಿರುವ ದೋಷಗಳು ನಮಗೇ ತಿಳಿಯದೆ, ಅವನ್ನು ಇತರರಲ್ಲಿ ಕಾಣುತ್ತೇವೆ – ಇದೂ ಪ್ರಮಾದ. ನಮ್ಮಿಂದ ಇತರರಿಗೆ ಆಗುವ ನೋವು ತಿಳಿಯುವುದೇ ಇಲ್ಲ. ಇತರರು ನಮ್ಮನ್ನು ನೋಯಿಸದಿದ್ದರೂ ನೋಯಿಸುತ್ತಿದ್ದಾರೆಂದು ಭ್ರಮಿಸುವುದೂ ಪ್ರಮಾದವೇ.

ತಮಸ್ಸಿನ ಇನ್ನೊಂದು ಗುಣ ಸೋಮಾರಿತನ. ಇದರ ಬಗ್ಗೆ ಅಲೆಕ್ಸಿಸ್ ಕ್ಯಾರೆಲ್ ಹೀಗೆ ಹೇಳುತ್ತಾರೆ:

ಸೋಮಾರಿತನವು ವಿಶೇಷವಾಗಿ ವಿನಾಶಕಾರಿ. ಸೋಮಾರಿತನವೆಂದರೆ ಏನೂ ಮಾಡದಿರುವುದು ಮಾತ್ರವಲ್ಲ , ಅತಿಯಾಗಿ ನಿದ್ರಿಸುವುದು ಮಾತ್ರವಲ್ಲ, ಕೆಲಸವನ್ನು ಕೆಟ್ಟದಾಗಿ ಮಾಡುವುದಷ್ಟೇ ಅಲ್ಲ; ಬಿಡುವಿನ ಸಮಯವನ್ನು ಮೂರ್ಖ ಮತ್ತು ವ್ಯರ್ಥ ವಿಷಯಗಳಲ್ಲಿ ಕಳೆಯುವುದೂ ಸೋಮಾರಿತನವೇ. ಇಸ್ಪೀಟಾಡುವುದು, ಯಾವಾಗಲೂ ಸಿನಿಮಾ, ಟಿ.ವಿ ನೋಡುತ್ತಿರುವುದು, ಕೊನೆಯಿಲ್ಲದ ಹರಟೆ, ಗೊತ್ತುಗುರಿಯಿಲ್ಲದೆ ಕಾರು ಮೋಟಾರ್ ಸೈಕಲ್ಲುಗಳಲ್ಲಿ ಓಡಾಡುತ್ತಿರುವುದು – ಇವೆಲ್ಲವೂ ನಮ್ಮ ಬುದ್ಧಿಶಕ್ತಿಯನ್ನು ಕುಂಠಿತಗೊಳಿಸುತ್ತವೆ. ಎಲ್ಲವನ್ನೂ ತಿಳಿದು ಯಾವುದನ್ನೂ ಸರಿಯಾಗಿ ತಿಳಿಯದಿರುವುದೂ ಉಚಿತವಲ್ಲ. ಸಂಪರ್ಕ ಮಾಧ್ಯಮವು ಅತಿಯಾಗಿ ಬೆಳೆದಿರುವ ಈಗಿನ ಸಂದರ್ಭದಲ್ಲಿ ಅನೇಕ ಪ್ರಲೋಭನೆಗಳಿಂದ ನಮ್ಮನ್ನು ಕಾಪಾಡಿಕೊಳ್ಳುವುದು ಅತಿಮುಖ್ಯ.

ಸತ್ತ್ವಗುಣದಿಂದ ಸುಖವುಂಟಾಗುತ್ತದೆ – ಎಷ್ಟೇ ಕಷ್ಟಗಳಿದ್ದರೂ ಕೂಡ ಈ ಸುಖವು ಆಸೆಗಳ ಪೂರ್ತಿಯಿಂದ ದೊರೆಯುವಂತಹುದಲ್ಲ , ಆಸೆಗಳ ನಿಗ್ರಹದಿಂದ ದೊರೆಯುವಂತಹುದು. ಮಹಾಭಾರತದ ಒಂದು ಶ್ಲೋಕವಿದೆ:

**ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ ।**
**ತೃಷ್ಣಾಕ್ಷಯಸುಖಸ್ಯೈತೇ ನಾರ್ಹಂತೇ ಷೋಡಶೀಂ ಕಲಾಮ್॥**

ಈ ಜಗತ್ತಿನ ಕಾಮಸುಖ ಮತ್ತು ಸ್ವರ್ಗದ ಅಪಾರ ಸುಖ ಇವೆರಡನ್ನು ಒಟ್ಟಿಗೆ ಸೇರಿಸಿದರೂ ಆಸೆಗಳ ನಾಶದಿಂದ ಉಂಟಾಗುವ ಸುಖದ ಹದಿನಾರನೆ ಒಂದು ಅಂಶವೂ ಆಗುವುದಿಲ್ಲ. ತೃಷ್ಣಾಕ್ಷಯದಿಂದ ಒಂದು ಬಗೆಯ ಮುಕ್ತಿಯ ಭಾವ ನಮಗುಂಟಾಗುತ್ತದೆ.

ಈ ಸ್ವಾತಂತ್ರ್ಯದಿಂದ ಉಂಟಾಗುವ ಅಪಾರ ಆನಂದ ಸಾತ್ತ್ವಿಕವಾದುದು. ರಜೋಗುಣದ ಫಲ ದುಃಖ. ರಜಸ್ಸಿನಿಂದ ಆಸೆಯುಂಟಾಗುತ್ತದೆ ಮತ್ತು 'ಆಸೆಯೇ ದುಃಖಕ್ಕೆ ಕಾರಣ' ಆಸೆಯೇ ದುಃಖ ಎಂದು ಹೇಳಬಹುದು, ಏಕೆಂದರೆ ಅದು ಬಂಧನ. ಮಂಗನನ್ನು ಹಿಡಿಯುವ ಒಂದು ವಿಧಾನವಿದೆ. ಚಿಕ್ಕ ಮೂತಿಯ ಮಡಕೆಯೊಳಗೆ ಕೆಲವು ಕಾಳುಗಳನ್ನು ಹಾಕಿ ಅದನ್ನು ನೆಲದಲ್ಲಿ ಹೂಳುತ್ತಾರೆ. ಮಂಗ ಬಂದು ಕಾಳನ್ನು ತಿನ್ನಲು ಕೈ ಒಳಗೆ ಹಾಕುತ್ತದೆ. ಮುಷ್ಟಿ ತುಂಬ ಕಾಳನ್ನು ಬಾಚಿಕೊಳ್ಳುತ್ತದೆ. ಈಗ ಮುಷ್ಟಿಯನ್ನು ಹೊರತೆಗೆಯಲು ಆಗುವುದಿಲ್ಲ. ಆಗ ಜನರು ಅದನ್ನು ಹಿಡಿಯಲು ಬರುತ್ತಾರೆ. ಕಾಳನ್ನು ಬಿಟ್ಟರೆ ಕೈಯನ್ನು ಹೊರತೆಗೆದು ತಪ್ಪಿಸಿಕೊಂಡು ಹೋಗಬಹುದು. ಆದರೆ ಕಾಳಿನ ಆಸೆ ಹಾಗೆ ಮಾಡಲು ಬಿಡುವುದಿಲ್ಲ. ಹೀಗೆ ಅದು ಸಿಕ್ಕಿ ಹಾಕಿಕೊಂಡು ಬಿಡುತ್ತದೆ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ, ಯಾವುದಾದರೂ ಆಸೆಯನ್ನು ಈಡೇರಿಸಿಕೊಳ್ಳುವುದೆಂದರೆ ಒಂದು ಕಣಜದ ಗೂಡಿಗೆ ಕೋಲನ್ನು ಇಟ್ಟಂತೆ. ಆಸೆಗಳೆಂದರೆ ವಿಷದ ಮಾತ್ರೆಗಳೆಂದು ಅರಿಯುವುದೇ ವೈರಾಗ್ಯ.

ಸತ್ವಗುಣದ ಲಕ್ಷಣವನ್ನು ಮನು ಈ ಕೆಳಗಿನ ಶ್ಲೋಕದಲ್ಲಿ ವಿವರಿಸುತ್ತಾರೆ:

**ಯತ್ ಸರ್ವೇಣೇಚ್ಛತಿ ಜ್ಞಾತುಂ ಯನ್ನ ಲಜ್ಜತಿ ಚಾಚರನ್।**
**ಯೇನ ತುಷ್ಯತಿ ಚಾತ್ಮಾಸ್ಯ ತತ್ಸತ್ತ್ವಗುಣಲಕ್ಷಣಮ್ ॥**

'ಯಾವುದನ್ನು ಎಲ್ಲರೂ ತಿಳಿದುಕೊಳ್ಳಲು ಇಚ್ಛಿಸುತ್ತಾರೋ, ಯಾವುದನ್ನು ಆಚರಿಸುವುದರಿಂದ ನಾಚಿಕೆಯಾಗುವುದಿಲ್ಲವೋ ಮತ್ತು ಯಾವುದರಿಂದ ಅಂತರಾತ್ಮಕ್ಕೆ ತೃಪ್ತಿಯುಂಟಾಗುವುದೋ ಅದು ಸತ್ತ್ವಗುಣದ ಲಕ್ಷಣ.' ಇದರಿಂದ ಜ್ಞಾನ ಮತ್ತು ಸತ್ಕರ್ಮ ಎರಡೂ ಸತ್ತ್ವಗುಣದ ಪರಿಣಾಮ ಎಂಬುದು ತಿಳಿದುಬರುತ್ತದೆ. ಸದ್ಗುಣದಿಂದ ಸತ್ಕರ್ಮವುಂಟಾಗುತ್ತದೆ. ಆದ್ದರಿಂದ ಜ್ಞಾನ ಮತ್ತು ಸದ್ಗುಣ ಒಂದೇ – ಇದು ಗ್ರೀಕ್ ತತ್ತ್ವಜ್ಞಾನಿ ಸಾಕ್ರಟೀಸನ ಮತ. ಹಾಗಾದರೆ ಜ್ಞಾನವಂತರೆಲ್ಲರೂ, ವಿದ್ವನ್ಮಣಿಗಳೆಲ್ಲರೂ ಸದ್ಗುಣಶೀಲರಾಗಿರುತ್ತಾರೆಯೆ? ಹಾಗಿರುವುದು ನಮಗೆ ಕಂಡುಬರುವುದಿಲ್ಲ. ಸಾಕ್ರಟೀಸನು ಹೇಳುವಂತೆ, ಯಾರೂ ಇಚ್ಛಾಪೂರ್ವಕವಾಗಿ ಕೆಟ್ಟವರಾಗಿರುವುದಿಲ್ಲ, ಅಥವಾ ಅನೈಚ್ಛಿಕವಾಗಿ ಒಳ್ಳೆಯವರೂ ಆಗಿರುವುದಿಲ್ಲ. (No man is voluntarily bad or involuntarily good.) ಪ್ರವೃತ್ತಿಯ ಅಥವಾ ಪರಿಸ್ಥಿತಿಯ ಒತ್ತಡದಿಂದಾಗಿ ಮನುಷ್ಯನು ಕೆಟ್ಟವನಾಗುತ್ತಾನೆ. ಆದರೆ ಒಳ್ಳೆಯವರಾಗಿರುವುದು, ಮತ್ತು ಒಳ್ಳೆಯದನ್ನು ಮಾಡುವುದು ಇಚ್ಛಾಪೂರ್ವಕವಾಗಿ. ಇಂತಹ ಪ್ರಜ್ಞಾಪೂರ್ವಕವಾದ ಸದ್ಗುಣವು ಜ್ಞಾನಕ್ಕೆ ಸಂವಾದಿಯಾದುದು. ಇಲ್ಲಿ ಜ್ಞಾನವೆಂದರೆ ಕೇವಲ ವಿಷಯ ಜ್ಞಾನವಲ್ಲ. ಮಾಹಿತಿ ಸಂಗ್ರಹವಲ್ಲ. ವಿಚಾರಪೂರ್ವಕವೂ ಅಂತರ್ದೃಷ್ಟಿಪೂರ್ವಕವೂ ಆದ ವಿವೇಕ ಜ್ಞಾನ (wisdom) ಕೇವಲ ವಿಷಯಜ್ಞಾನವು ರಾಜಸಿಕವಾದುದು. ತಾಮಸಿಕನಲ್ಲಿ ಜ್ಞಾನಾಸಕ್ತಿಯೇ ಇರುವುದಿಲ್ಲ, ರಾಜಸಿಕನಿಗೆ ಮಾಹಿತಿಯಲ್ಲಿ ಇಷ್ಟ ಮತ್ತು ಸಾತ್ವಿಕನು ಮಾತ್ರ ವಿವೇಕಿಯಾಗಿರುತ್ತಾನೆ. ಮನಸ್ಸಿನ ಸತ್ತ್ವಾಂಶದಿಂದ ಜ್ಞಾನವುಂಟಾಗುವುದರಿಂದ ಯಾವುದೇ ಜ್ಞಾನವನ್ನೂ ಸಾತ್ತ್ವಿಕವೆಂದು ಕರೆಯಬಹುದು. ಆದರೆ ರಜೋಗುಣದ ಪ್ರಭಾವದಿಂದ ಅದರ ಸಾತ್ತ್ವಿಕಾಂಶವು ಮರೆಯಾಗುತ್ತದೆ.

ಸ್ವಾಮಿ ಯತೀಶ್ವರಾನಂದರು ಮೂರು ಬಗೆಯ ವೃತ್ತಿಶೂನ್ಯತೆಯನ್ನು ಪ್ರಸ್ತಾಪಿಸುತ್ತಾರೆ. ಮೊದಲನೆಯದು ತಾಮಸಿಕವಾದುದು – ಇಲ್ಲಿ ಮನಸ್ಸು ನಿಷ್ಕ್ರಿಯವಾಗುತ್ತದೆ. ನಿದ್ರೆ ಮಾಡುವುದಕ್ಕೆ ಮುಂಚೆ ಇದು ಅನುಭವಕ್ಕೆ ಬರುತ್ತದೆ. ಎರಡನೆಯದು ರಾಜಸಿಕವಾದುದು – ಎರಡು ಮಂಗಗಳು ಒಂದು ಮರದಲ್ಲಿ ನಿರಂತರವಾಗಿ ಕೊಂಬೆಯಿಂದ ಕೊಂಬೆಗೆ ಹಾರುತ್ತಿರುತ್ತವೆ. ಕೊನೆಗೆ ದಣಿವಾಗಿ ಸ್ವಲ್ಪಹೊತ್ತು ಸುಮ್ಮನಿರುತ್ತವೆ, ಅನಂತರ ಮತ್ತೆ ಚೇಷ್ಟೆ ಶುರುಮಾಡುತ್ತವೆ. ಮೂರನೆಯ ಅತ್ಯುನ್ನತವಾದ ವೃತ್ತಿಶೂನ್ಯತೆ ಸಾತ್ತ್ವಿಕವಾದುದು – ಇದು ಆಧ್ಯಾತ್ಮಿಕವಾದುದು. ಈ ಸ್ಥಿತಿಯಲ್ಲಿ ಸಾಧಕನಿಗೆ ಪವಿತ್ರತೆಯ ಭಾವವುಂಟಾಗುತ್ತದೆ ಮತ್ತು ತಾನು ಉನ್ನತ ಸ್ಥಿತಿಯಲ್ಲಿರುವ ಅನುಭವವಾಗುತ್ತದೆ.

ಸತ್ತ್ವಸ್ಥರು ಮೇಲಕ್ಕೆ ಏರುತ್ತಾರೆ, ಅಂದರೆ ಅವರು ಆಧ್ಯಾತ್ಮಿಕ ಜೀವನದಲ್ಲಿ ಮೇಲಮೇಲಕ್ಕೆ ಏರುತ್ತಾರೆ, ಏಕೆಂದರೆ ಅವರಿಗೆ ಆಸೆಗಳ ಬಂಧನವಿರುವುದಿಲ್ಲ, ಸಂಸ್ಕಾರಗಳು ಅವರನ್ನು ಕೆಳಕ್ಕೆ ಎಳೆಯುತ್ತಿರುವುದಿಲ್ಲ. ಅವರು ಶ್ರೀರಾಮಕೃಷ್ಣರು ಹೇಳುವಂತೆ ಹೋಮಾಪಕ್ಷಿಯಂತೆ. ಸಾತ್ತ್ವಿಕ ಜೀವನ ನಡೆಸಿದರೆ ಸಾಯುವ ಸಮಯದಲ್ಲಿಯೂ ಸಾತ್ತ್ವಿಕ ಸ್ಥಿತಿ ಇರುತ್ತದೆ. ಅಂತಹ ವ್ಯಕ್ತಿಯು ಆನಂದದಿಂದ, ಜ್ಞಾನದೊಡನೆ, ಸಚ್ಚಿಂತನೆಯೊಂದಿಗೆ ಮತ್ತು ಇತರರನ್ನು ಆಶೀರ್ವದಿಸುತ್ತ ಸಾಯುತ್ತಾನೆ. ಗಾಂಧೀಜಿ ಸಾವಿಗೆ ಎರಡು ದಿನಗಳ ಮುಂಚೆ ನಡೆದ ಘಟನೆ. ಅವರ ನಿಕಟವರ್ತಿಗಳಾದ ರಾಜಕುಮಾರಿ ಅಮೃತ ಕೌರ್ ಅವರನ್ನು ಸಂಧಿಸಿ ಕೇಳಿದರು: ''ಇಂದು ಪ್ರಾರ್ಥನಾ ಸಭೆಯ ಸಂದರ್ಭದಲ್ಲಿ ಏನಾದರೂ ಗದ್ದಲವಿತ್ತೆ?'' ಗಾಂಧೀಜಿ ಉತ್ತರಿಸಿದರು: ''ಇಲ್ಲ, ಈ ಪ್ರಶ್ನೆ ನೀವು ನನ್ನ ಬಗ್ಗೆ ಚಿಂತಿತರಾಗಿದ್ದೀರಿ ಎಂಬುದರ ಸೂಚಕವೆ? ನಾನು ಹುಚ್ಚನೊಬ್ಬನ ಗುಂಡೇಟಿಗೆ ಬಲಿಯಾಗುವುದಾದರೆ, ನಾನು ಮುಗುಳ್ನಗುತ್ತ ಸಾಯಬೇಕು. ನನ್ನೊಳಗೆ ಸ್ವಲ್ಪವೂ ಕೋಪವಿರಬಾರದು. ನನ್ನ ಹೃದಯದಲ್ಲಿಯೂ ನಾಲಗೆಯ ತುದಿಯಲ್ಲಿಯೂ ದೇವರು ಇರಬೇಕು. ನೀವೊಂದು ಮಾತು ಕೊಡಬೇಕು, ನಾನು ಗುಂಡಿಗೆ ಬಲಿಯಾದರೆ ನೀವು ಕಣ್ಣೀರು ಸುರಿಸಬಾರದು.'' ಅವರು ನಿರೀಕ್ಷಿಸಿದಂತೆಯೇ ಆಯಿತು. ದೇವರ ನಾಮವನ್ನು ಉಚ್ಚರಿಸುತ್ತಲೇ ಮೃತ್ಯುವನ್ನಪ್ಪಿದರು. ಆದರೆ ಅವರ ಕೇಳಿಕೆ ಮಾತ್ರ ಈಡೇರಲಿಲ್ಲ. ಅಂದು ಕಣ್ಣೀರು ಸುರಿಸದವರು ಎಲ್ಲೋ ಕೆಲವು ಮಂದಿ. ಅಷ್ಟೇ ಅಲ್ಲದೆ ಅನೇಕ ದಿನಗಳವರೆಗೆ ಅನೇಕರು ಕಣ್ಣೀರು ಸುರಿಸಿದರು.

ರಾಜಸಿಕ ವ್ಯಕ್ತಿಗಳು ಆಸೆಗಳಿಂದ ಬದ್ಧರಾಗಿರುವುದರಿಂದ ಮೇಲಕ್ಕೂ ಹೋಗದೆ, ಕೆಳಕ್ಕೂ ಇಳಿಯದೆ ಯಾವಾಗಲೂ ಪ್ರಾಪಂಚಿಕರಾಗಿಯೇ ಇರುತ್ತಾರೆ. ಇಂದ್ರಿಯ ಸುಖವೇ ಅವರಿಗೆ ಪ್ರಧಾನವಾಗಿರುತ್ತದೆ. ಅವರು ಸ್ವರ್ಗಕ್ಕೆ ಹೋದರೆ ಅಲ್ಲಿಯೂ ಇಂದ್ರಿಯ ಸುಖದಲ್ಲಿಯೇ ಮಗ್ನರಾಗಿರುತ್ತಾರೆ. ಈ ಪ್ರಾಪಂಚಿಕ ಸುಖದ ತೀವ್ರಾವಸ್ಥೆಯೇ ಸ್ವರ್ಗ. ತಾಮಸಿಕ ವ್ಯಕ್ತಿಗಳಿಗೆ ಇಂದ್ರಿಯ ಸುಖವನ್ನು ಅನುಭವಿಸುವುದಕ್ಕೂ ಸೋಮಾರಿತನ. ಪ್ರಾಪಂಚಿಕ ಸುಖವನ್ನು ಅನುಭವಿಸಬೇಕಾದರೂ ದುಡಿದು ಹಣಸಂಪಾದನೆ ಮಾಡಬೇಕು. ಅದಕ್ಕೆ ಸೋಮಾರಿತನ ಬಿಡುವುದಿಲ್ಲ. ತೀರ ಕೆಳಮಟ್ಟದ ಇಂದ್ರಿಯ ತೃಪ್ತಿಯಲ್ಲಿಯೇ ಅವರು ಮಗ್ನರಾಗಿರುತ್ತಾರೆ. ಈ ಸ್ಪರ್ಧಾತ್ಮಕ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲಾಗದೆ ಕೊಳಚೆ ಪ್ರದೇಶದಲ್ಲಿಯೇ, ಕೆಲವೊಮ್ಮೆ ಪ್ರಾಣಿಗಳಿಗಿಂತಲೂ ಹೀನ ತರವಾದ, ನಮಗಿಷ್ಟೇ ಸಾಕಪ್ಪ ಎಂಬ 'ಶೋಚನೀಯ ಸಂತೃಪ್ತಿಯ', ಅಭ್ಯುದಯದಲ್ಲಿಯೂ ಆಸಕ್ತಿಯಿಲ್ಲದ (ನಿಃಶ್ರೇಯಸ್ಸಂತೂ ದೂರದ ಮಾತು – ಅದು ಸಾತ್ತ್ವಿಕ ಲಕ್ಷಣ) ಜೀವನ ನಡೆಸುತ್ತಾರೆ.

ಸ್ವಾಮಿ ವಿವೇಕಾನಂದರ ಪ್ರಕಾರ ಜ್ಞಾನಕ್ಕೆ ಮೂರು ಪ್ರಭೇದಗಳಿವೆ: ಹುಟ್ಟುಗುಣ, ಯುಕ್ತಿ ಮತ್ತು ಅಂತರ್ದೃಷ್ಟಿ. ಅವರು ಹೇಳುತ್ತಾರೆ: ''ಹುಟ್ಟುಗುಣವು ಮಂಜುಗಡ್ಡೆಯಂತೆ, ಯುಕ್ತಿಯು ನೀರಿನಂತೆ ಮತ್ತು ಅಂತರ್ದೃಷ್ಟಿಯು ಸೂಕ್ಷ್ಮವಾದ ಆವಿಯಂತೆ. ಇವು ಒಂದಾದ ಮೇಲೊಂದು ಬರುತ್ತವೆ.'' ಹುಟ್ಟುಗುಣವು ತಮಃಪ್ರಧಾನವೆಂದೂ ಯುಕ್ತಿಯು ರಜಃಪ್ರಧಾನವೆಂದೂ ಅಂತರ್ದೃಷ್ಟಿಯು ಸತ್ತ್ವಪ್ರಧಾನವೆಂದೂ ಹೇಳಬಹುದು. ಇಂತಹ ಸಾತ್ತ್ವಿಕ ಜ್ಞಾನವು ವ್ಯಕ್ತಿಯಲ್ಲಿ ಅಧಿಕವಾದಾಗ ಅವನ ಇಡೀ ವ್ಯಕ್ತಿತ್ವವೇ ಅಪೂರ್ವ ಶೋಭೆಯಿಂದ ಬೆಳಗುತ್ತದೆ ಎಂದು ಶ್ರೀಕೃಷ್ಣನು ಹೇಳುತ್ತಾನೆ.

ಇಷ್ಟೆಲ್ಲ ಗುಣಗಳ ವಿಷಯವನ್ನು ಹೇಳಿ, ಈ ಮೂರು ಗುಣಗಳನ್ನು ಮೀರಿ ಹೊಗುವುದು ಆತ್ಯಂತಿಕ ಗುರಿ ಎಂದು ಶ್ರೀಕೃಷ್ಣನು ಹೇಳಿ ಗುಣಾತೀತನ ಲಕ್ಷಣಗಳನ್ನು ವಿವರಿಸುತ್ತಾನೆ. ತ್ರಿಗುಣಗಳ ಪರಿಣಾಮದಿಂದ ವ್ಯಕ್ತಿತ್ವದಲ್ಲಿ ಉಂಟಾಗುವ ಎಲ್ಲ ಬದಲಾವಣೆಗಳ ವಿಷಯದಲ್ಲೂ ಅವನು ನಿರ್ಲಿಪ್ತನಾಗಿರುತ್ತಾನೆ. ಸತ್ತ್ವಗುಣದ ಪರಿಣಾಮದಿಂದ ಸುಖ ಮತ್ತು ಜ್ಞಾನ ಉಂಟಾಗಬಹುದು ಅಥವಾ ಹೋಗಬಹುದು. ಕೆಲವು ವಿದ್ವಾಂಸರು ವೃದ್ಧಾಪ್ಯದಲ್ಲಿ ಸ್ಮೃತಿಲೋಪದಿಂದ ತಾವು ಸಂಪಾದಿಸಿದ ಜ್ಞಾನವನ್ನೆಲ್ಲ ಕಳೆದುಕೊಂಡು ತುಂಬ ಪರಿತಪಿಸುತ್ತಾರೆ. ಆದರೆ ಗುಣಾತೀತನು ಜ್ಞಾನವಿದ್ದಾಗಲೂ ಹೆಮ್ಮೆಪಡುವುದಿಲ್ಲ, ಅದನ್ನು ಕಳೆದುಕೊಂಡಾಗಲೂ ಪರಿತಪಿಸುವುದಿಲ್ಲ. ಗುಣಾತೀತನು ಸುಮ್ಮನಿರುತ್ತಾನೆ, ಕೆಲಸ ತಾನಾಗಿ ಬಂದರೆ ಮಾಡುತ್ತಾನೆ, ಕೆಲಸವಿಲ್ಲವೆಂದು ಚಿಂತಿಸುವುದೂ ಇಲ್ಲ. ಅಂದರೆ ಅವನು ರಜೋಗುಣದ ಪ್ರಭಾವಕ್ಕೂ ವಶನಾಗಿರುವುದಿಲ್ಲ. ಕೆಲವೊಮ್ಮೆ ಅವನು ಜಡನಾಗಿಯೂ ಇರಬಹುದು. ಇದು ತಮಸ್ಸಿನ ಗುಣ. ಹೀಗೆ ಅವನು ಗುಣಗಳ ಕ್ರಿಯೆಯಿಂದ ವಿಚಲಿತನಾಗುವುದಿಲ್ಲ. ಇಲ್ಲಿ ವಿವರಿಸುವ ಗುಣಾತೀತನ ಲಕ್ಷಣಗಳು ಹಿಂದೆ ಹೇಳಿದ ಸ್ಥಿತಪ್ರಜ್ಞ ಮತ್ತು ಭಕ್ತನ ಲಕ್ಷಣಗಳಿಗೆ ಸಮಾನವಾಗಿವೆ. ಮುಂದೆ ಹದಿನೇಳು ಮತ್ತು ಹದಿನೆಂಟನೆಯ ಅಧ್ಯಾಯದ ಆದಿಭಾಗದಲ್ಲಿ ಮತ್ತೆ ಈ ಗುಣತ್ರಯ ವಿಭಾಗವು ಬರುತ್ತದೆ. ಅಲ್ಲಿ ಜೀವನದ ಎಲ್ಲ ಅಂಶಗಳಿಗೂ ಇವನ್ನು ಅನ್ವಯಿಸಿ ವಿವರಿಸಲಾಗಿದೆ. ✷

## ವೇದಸಂಸ್ಕೃತಿಯಲ್ಲಿ ವಿಗ್ರಹಾರಾಧನೆ

ಆಧ್ಯಾತ್ಮಿಕ ದೃಷ್ಟಿಯಿಂದ ವೇದವಾಙ್ಮಯವು ಭಕ್ತಿ, ಜ್ಞಾನ, ಕರ್ಮ ಮುಂತಾದ ಎಲ್ಲ ಭಾರತೀಯ ತತ್ತ್ವಗಳಿಗೂ ಮೂಲ. ವೇದದಲ್ಲಿ ಹೇಳಿದ ಶ್ರದ್ಧಾ, ಉಪನಿಷತ್ತುಗಳ ಉಪಾಸನಾ ಇವೇ ಪುರಾಣಗಳ ಕಾಲದಲ್ಲಿ ಭಕ್ತಿ ಎಂಬುದಾಗಿ ಪರಿಣಮಿಸಿದುವು. ಆದುದರಿಂದ ಭಕ್ತಿಮಾರ್ಗಕ್ಕೆ ವಿದೇಶೀಯ ಮತಗಳ ಸಂಪರ್ಕವೇ ಕಾರಣವೆಂದು ಕೆಲವು ಪಾಶ್ಚಾತ್ಯರು ಹೇಳಿರುವುದಕ್ಕೆ ಯಾವ ಆಧಾರವೂ ಇಲ್ಲ. ಪ್ರಾಚೀನ ಆರ್ಯರು ಪ್ರಕೃತಿಯ ಶಕ್ತಿಗಳನ್ನು ಉತ್ಪ್ರೇಕ್ಷಿಸಿ ಇಂದ್ರ, ವರುಣ, ಅಗ್ನಿ, ರುದ್ರ, ವಿಷ್ಣು, ಸೂರ್ಯ, ಸೋಮ ಇತ್ಯಾದಿ ದೇವತೆಗಳನ್ನಾಗಿ ಭಾವಿಸಿದ್ದರಿಂದ ವೇದಗಳಲ್ಲಿ ಉಚ್ಚತರವಾದ ಆಧ್ಯಾತ್ಮಿಕ ವಿವೇಚನೆ ಕಂಡುಬರುವುದಿಲ್ಲವೆಂದೂ, ಋಷಿಗಳಿಗೆ ಮುಖ್ಯವಾಗಿ ದಕ್ಷಿಣೆಯ ಮೇಲೆಯೇ ಆಸೆಯೆಂದೂ, ಆ ಕಾಲದಲ್ಲಿ ಮೂರ್ತಿಪೂಜೆಯಿರಲಿಲ್ಲವೆಂದೂ ಉಪನಿಷತ್ತುಗಳ ಕಾಲದಲ್ಲಿ ಮಾತ್ರ ಬ್ರಹ್ಮ–ಆತ್ಮ ಸಂಬಂಧವು ಕಲ್ಪಿತವಾಯಿತೆಂದೂ ಪಾಶ್ಚಾತ್ಯ ಪಂಡಿತಂಮನ್ಯರು ಹೇಳುವರು. ಇದು ಕೇವಲ ಭ್ರಾಂತಿ. ವೇದಗಳಲ್ಲಿ ಸಗುಣ ನಿರ್ಗುಣ ಭೇದವನ್ನನುಸರಿಸಿ ದೇವತಾಮೂರ್ತಿಗಳ ಮತ್ತು ಆತ್ಮದ ಉಲ್ಲೇಖವಿದೆ. ಇಂದ್ರನು ತವಗ್ರೀವ, ವಪೋದರ, ಸುಬಾಹು, ಸುಶಿಪ್ರ, ಹರಿಕೇಶ ಎಂದೂ, ರುದ್ರನು ರುದೂದರ, ಭಭ್ರು, ಸ್ಥಿರವಾದ ಅಂಗವುಳ್ಳವನು, ಪುರುರೂಪನು, ಉಗ್ರನು ಎಂದೂ, ವಿಷ್ಣುವು ಯುವ, ಬೃಹಚ್ಛರೀರನೆಂದೂ, ಪೂಷನು ಶ್ಮಶ್ರು ಉಳ್ಳವನು ದಂತಹೀನನು ಎಂದೂ, ಸವಿತೃ ಮತ್ತು ವರುಣರಿಗೆ 'ಹಿರಣ್ಯದ್ರಾಪಿ'ಯಿದೆ ಎಂದೂ ವರ್ಣಿಸಿರುವುದರಿಂದಲೂ, ಭಾರತೀ, ಇಡಾ, ಸರಸ್ವತೀ ದೇವಿಯರು ಹಿರಣ್ಯಾಭರಣಭೂಷಿತರೆಂದೂ, ಸರಸ್ವತಿಗೆ ವಾಗ್ರೂಪ, ನದೀರೂಪ ಮತ್ತು ಮೂರ್ತಿರೂಪವಿದೆಯೆಂದು ಹೇಳಿರುವುದರಿಂದಲೂ, ಇಂದ್ರನ ವಿಗ್ರಹಗಳನ್ನು ಮನೆಯಲ್ಲಿ ಋಷಿಗಳು ಪೂಜಿಸುತ್ತಿದ್ದರೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಆರ್ಯರು ವಿಗ್ರಹಾರಾಧನೆಯನ್ನೂ ಮಾಡುತ್ತಿದ್ದರೆಂದು ನಿರ್ಧರಿಸಬಹುದು.

*(ಡಾ. ಎಸ್.ಶ್ರೀಕಂಠಶಾಸ್ತ್ರೀ, 'ಭಾರತೀಯ ಸಂಸ್ಕೃತಿ', ಪು.೬೫–೬೬, ೨೦೦೬ರ ಪ್ರಕಟಣೆ)*

# ಆಧ್ಯಾತ್ಮಿಕ ಸಂಭಾಷಣೆ



## ಸ್ವಾಮಿ ಭೂತೇಶಾನಂದಜಿಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ

**ಪ್ರಶ್ನೆ:** ಎಲ್ಲ ಧರ್ಮಗಳೂ ಸತ್ಯ, ಎಷ್ಟು ಮತವೋ ಅಷ್ಟು ಪಥ ಎಂದು ಠಾಕೂರ್ ಹೇಳುತ್ತಾರೆ. ಆದರೆ ಬೇರೆ ಬೇರೆ ಧರ್ಮಗಳಲ್ಲಿ ಎಷ್ಟು fundamental rules (ಮೂಲಭೂತ ನಿಯಮಗಳು) ಇವೆ!

**ಮಹಾರಾಜ್:** fundamental ! ಯಾರು fundamentalist ಆಗಿದ್ದಾರೋ, ಅವರೇ fundamental rules ಹೇಳುತ್ತಾರೆ.

**ಪ್ರಶ್ನೆ:** ಬೌದ್ಧ ಮತ್ತು ಹಿಂದೂ ಧರ್ಮಗಳಲ್ಲಿ ಜನ್ಮಾಂತರ (ಪುನರ್ಜನ್ಮ) ತತ್ತ್ವ ಇದೆ. ಆದರೆ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳಲ್ಲಿ ಅದು ಇಲ್ಲ.

**ಮಹಾರಾಜ್:** ಸರಿ, ಬೌದ್ಧ ಮತ್ತು ಹಿಂದೂ ಧರ್ಮಗಳನ್ನೇ ನೋಡೋಣ. ಬೌದ್ಧರು ನಿರ್ವಾಣ ಎನ್ನುತ್ತಾರೆ, ಹಿಂದೂಗಳು ಮುಕ್ತಿ ಎನ್ನುತ್ತಾರೆ. ಅಂದರೆ ಅಜ್ಞಾನದ ನಿವೃತ್ತಿ. ಇಲ್ಲಿ ವ್ಯತ್ಯಾಸವೆಲ್ಲಿ ಬಂತು? ಎಲ್ಲರೂ ವಾಸನಾಶೂನ್ಯರಾಗಬೇಕು ಎಂದೇ ಎಲ್ಲರೂ ಹೇಳುತ್ತಾರೆ. ಈ ರೀತಿ ಇದು ಹೋಲಿಕೆ ಎಂದಾಗುವುದಿಲ್ಲವೆ ?

**ಪ್ರಶ್ನೆ:** ಇಲ್ಲ ಮಹಾರಾಜ್, ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳಲ್ಲಿ ಜನ್ಮಾಂತರ ತತ್ತ್ವ ಇಲ್ಲ.

**ಮಹಾರಾಜ್:** ಜನ್ಮಾಂತರವಿಲ್ಲ , ಸರಿ. ಆದರೆ ವಾಸನಾಶೂನ್ಯರಾಗ ಬೇಕೆಂದು ಅಲ್ಲಿಯೂ ಹೇಳಿದೆ. ಇಲ್ಲಿ ಸ್ವಲ್ಪ ಪ್ರಯತ್ನಪಟ್ಟರೆ ವ್ಯತ್ಯಾಸ ತಿಳಿಯುತ್ತದೆ. ಇನ್ನೂ ಸ್ವಲ್ಪ ಒಳಹೊಕ್ಕರೆ ಅದರೊಳಗೆ ಅವುಗಳಲ್ಲಿ ಹೋಲಿಕೆಯೂ ಕಂಡುಬರುತ್ತದೆ.

**ಪ್ರಶ್ನೆ:** ಸೆಮಿಟಿಕ್ ಧರ್ಮಗಳು ಜನ್ಮಾಂತರವನ್ನು ಒಪ್ಪುವುದಿಲ್ಲ.

**ಮಹಾರಾಜ್:** ಮೃತ್ಯುವಿನ ನಂತರ ಅಸ್ತಿತ್ವ ಇದೆ ಎಂದು ಒಪ್ಪಿ ಕೊಳ್ಳುವ ಎಲ್ಲ ಧರ್ಮಗಳನ್ನೂ ಒಪ್ಪಿಕೊಳ್ಳಬೇಕು. ಸತ್ತ ಮೇಲೆ ಯಾವ ಅಸ್ತಿತ್ವವೂ ಇಲ್ಲವೆಂದು ಹೇಳುವವರಿದ್ದರೆ ಅವರಿಗೆ ಯಾವ ಧರ್ಮವೂ ಇಲ್ಲ. ಎಲ್ಲ ಧರ್ಮಗಳೂ ಮೃತ್ಯುವಿನ ನಂತರ ಅಸ್ತಿತ್ವ ವನ್ನು ಸ್ವೀಕರಿಸುತ್ತವೆ. ಬೌದ್ಧರೂ ಒಪ್ಪುತ್ತಾರೆ, ಹಿಂದೂಗಳು ಒಪ್ಪು ತ್ತಾರೆ. ಇಸ್ಲಾಂ ಕೂಡ ಮನ್ನಿಸುತ್ತದೆ. ಇಸ್ಲಾಂನಲ್ಲಿ ಹೊಸತೇನೂ ಇಲ್ಲ. ಸೆಮಿಟಿಕ್ ಧರ್ಮ – ಯಾವುದು ಯಹೂದ್ಯರ ಧರ್ಮವೋ, ಕ್ರೈಸ್ತರದೂ ಅದೇ, ಮುಸಲ್ಮಾನರದ್ದೂ ಅದೇ. ಎಲ್ಲ Semitic.

**ಪ್ರಶ್ನೆ:** ಕೆಲವರು ಜನ್ಮಾಂತರ ಇದೆ ಎನ್ನುತ್ತಾರೆ, ಕೆಲವರು ಜನ್ಮಾಂತರ ವಿಲ್ಲವೆಂದು ಹೇಳುತ್ತಾರೆ. ಯಾವುದು ಸರಿ ಎಂದು ತಿಳಿಯುವುದಿಲ್ಲ.

**ಮಹಾರಾಜ್:** ಜನ್ಮಾಂತರ ಇಲ್ಲವೆಂದು ಯಾವ ಮತದಲ್ಲಿ ಹೇಳಿದೆ?

**ಪ್ರಶ್ನೆ:** ಮುಸಲ್ಮಾನ್ ಮತ್ತು ಕ್ರೈಸ್ತ ಧರ್ಮದಲ್ಲಿ.

**ಮಹಾರಾಜ್:** ಬೌದ್ಧ ಧರ್ಮದಲ್ಲಿ ಇದೆ. Semitic religionನಲ್ಲಿ ಜನ್ಮಾಂತರವಿಲ್ಲ, ಆದರೆ ಅದರ ಅಸ್ತಿತ್ವವಿದೆ. ದೇಹಾಂತರವಾದ ಮೇಲೆ ಜೀವದ ಅಸ್ತಿತ್ವ ಇದೆ. ಅದಿಲ್ಲದಿದ್ದರೆ ಯಾರು ಸ್ವರ್ಗಕ್ಕೆ ಹೋಗುತ್ತಾರೆ, ಯಾರು ನರಕಕ್ಕೆ ಹೋಗುತ್ತಾರೆ?

ಜೀವದ ಅಸ್ತಿತ್ವ ಇದ್ದದ್ದೇ ಆದರೆ,

ದೇಹ ಜೀವವಲ್ಲ. ದೇಹ ಸುಟ್ಟು ಒಂದು ಹಿಡಿ ಬೂದಿಯಾಗುತ್ತದೆ. ಹಾಗಾಗಿ ದೇಹವನ್ನು ಮೀರಿದ್ದು ಯಾವುದು? ಜೀವವೇ. ಈ ಸಿದ್ಧಾಂತ ಎಲ್ಲರಿಗೂ ಒಂದೇ. ತಿಳಿಯಿತೆ? ಹೋಲಿಸಿ ನೋಡು.

**ಪ್ರಶ್ನೆ:** ಬ್ರಹ್ಮಜ್ಞಾನ, ಆತ್ಮಜ್ಞಾನ ಮತ್ತು ಭಗವದ್‌ಲಾಭ ಇವು ಒಂದೇನೆ, ಮಹಾರಾಜ್?

**ಮಹಾರಾಜ್:** ಆತ್ಮಜ್ಞಾನವೆಂದರೆ ತನ್ನ ಸ್ವರೂಪದ ಜ್ಞಾನ; ಬ್ರಹ್ಮಜ್ಞಾನ ವೆಂದರೆ (ಬ್ರಹ್ಮ ಅಂದರೆ ಬೃಹತ್) ಜಗತ್ತಿಗೆ ಕಾರಣನಾದ ಸರ್ವ ವ್ಯಾಪಿ ಬ್ರಹ್ಮನ ಜ್ಞಾನ. '**ಯೇನ ಜಾತಾನಿ ಜೀವಂತಿ ... ತತ್ ಬ್ರಹ್ಮ.**' ಇನ್ನು ಭಗವದ್‌ಲಾಭವೆಂದರೆ: **ಭಗ** ಅಂದರೆ, ಆತನು ಷಡೈಶ್ವರ್ಯ ಪೂರ್ಣನಾಗಿ ಇಡೀ ಜಗತ್ತನ್ನು ಆವರಿಸಿಕೊಂಡಿದ್ದಾನೆ, ಆತನ ಜ್ಞಾನ. ಇವೇ ಈ ಮೂರು ಶಬ್ದಗಳ ಅರ್ಥ.

**ಪ್ರಶ್ನೆ:** 'ಶ್ರೀರಾಮಕೃಷ್ಣ ವಚನವೇದ' ದಲ್ಲಿ ಠಾಕೂರ್ ಹೇಳುತ್ತಾರೆ, ಭಕ್ತಿ ಪಕ್ವವಾದರೆ ಭಾವ, ಭಾವ ಪಕ್ವವಾದರೆ ಮಹಾಭಾವ ಅಥವಾ ಪ್ರೇಮ ಎಂದು. ಮಹಾಭಾವವಾದ ಮೇಲೆ ವಸ್ತುಲಾಭ (ಬ್ರಹ್ಮ ಜ್ಞಾನ) ವಾಗುತ್ತದೆ. ಜೀವಿಗಳು ಭಾವದ ತನಕ ಏರಬಲ್ಲರು, ಅಂದರೆ ಜೀವಿಗಳಿಗೆ ಮಹಾಭಾವ, ಅಥವಾ ಪ್ರೇಮ ಸಿಗುವುದಿಲ್ಲ. ಇನ್ನು ಮಹಾಭಾವವಾಗದಿದ್ದರೆ ವಸ್ತು ಲಾಭವಾಗುವುದಿಲ್ಲ. ಇಲ್ಲಿ ಜೀವಿಗಳ ಗತಿ ಏನು?

**ಮಹಾರಾಜ್:** ಜೀವಿಗಳಿಗೆ ಮಹಾಭಾವ ಉಂಟಾಗುವುದಿಲ್ಲವೆಂದರೆ, ಅಧಿಕಾರಿಯಲ್ಲದವರಿಗೆ (ಅಧ್ಯಾತ್ಮದಲ್ಲಿ ಮೇಲಿನ ಹಂತಕ್ಕೆ ಏರ ದವರಿಗೆ) ಅದು ಸಿಗುವುದಿಲ್ಲ ಎಂದರ್ಥ. ಅವತಾರಗಳಿಗೆ ಅದು ಸಿಗುತ್ತದೆ. ಅವತಾರ ಪುರುಷರಿಗೆ ಮಹಾಭಾವ ಬಂದ ಮೇಲೂ ಅವರು ಈ ಜಗತ್ತಿನಲ್ಲಿ ಇರಬಲ್ಲರು. ಚೈತನ್ಯದೇವ, ಶ್ರೀರಾಮಕೃಷ್ಣರು ಇವರುಗಳಿಗೆ ಮಹಾಭಾವ ಬಂದಿತ್ತು. ಅನಂತರವೂ ಅವರು ಈ ಜಗತ್ತಿನಲ್ಲಿದ್ದರು. ಆದರೆ ಸಾಮಾನ್ಯ ಜನರಿಗೆ ಮಹಾಭಾವ ಬಂದರೆ ಅವರು ಹಿಂದಿರುಗಲಾರರು. ಅಂತಹವರು ಹಿಂದಿರುಗುವ ಆವಶ್ಯ ಕತೆ ಕೂಡ ಇಲ್ಲ. ಈ ಭಾವ ಅಲ್ಲಿಯ ತನಕವೂ ಸಾಗುತ್ತದೆ.

**ಪ್ರಶ್ನೆ:** ಮಹಾರಾಜ್, ಇವತ್ತು Good Friday (ಕ್ರೈಸ್ತರ ಶುಭ ಶುಕ್ರವಾರ), Good ಎಂದು ಏಕೆ ಹೇಳುತ್ತಾರೆ?

**ಮಹಾರಾಜ್:** ಏಸುಕ್ರಿಸ್ತನು ಲೋಕಕಲ್ಯಾಣಕ್ಕಾಗಿ, ಜಗತ್ತಿನ ಹಿತಕ್ಕಾಗಿ ತನ್ನ ಜೀವನವನ್ನು ಅರ್ಪಿಸಿದ್ದಕ್ಕಾಗಿ ಈ ದಿನವನ್ನು good ಎಂದು ಹೇಳುತ್ತಾರೆ. ತಾನೇ ಸ್ವತಃ ಶಿಲುಬೆಯನ್ನು ಹಿಡಿದುಕೊಂಡು, ಅವನು ತನ್ನ ಪ್ರಾಣವನ್ನರ್ಪಿಸಿದ್ದ. ಈ ಘಟನೆ ಹೇಗೆಂದರೆ, ಆತನನ್ನು ಶಿಲುಬೆ

ಗೇರಿಸಿ ತುಂಬಾ ಹೊತ್ತಾದರೂ ಕೂಡ, ಆತನು ಮೃತ್ಯುವಶನಾಗಲಿಲ್ಲ. ಸೈನಿಕರು ಕಾವಲು ಕಾಯುತ್ತಿದ್ದರು. ಸೈನಿಕರಿಗೋ ವಿಳಂಬವಾಗುತ್ತಿತ್ತು. ಆಗ ಒಬ್ಬ ಒಂದು ಕೊಡಲಿ ತಂದು ಆತನ ಪಕ್ಕೆಲುಬುಗಳಿಗೆ ಹೊಡೆದ; ಬೇಗ ಸಾಯಲೆಂದು.

**ಪ್ರಶ್ನೆ:** Mourning Day (ಶೋಕ ದಿನ) ಎಂದೂ ಹೇಳುತ್ತಾರೆ.

**ಮಹಾರಾಜ್:** Mourning ಏಕೆ? ಆತ ಜಗತ್ತಿನ ಹಿತಕ್ಕಾಗಿ ತನ್ನ ಪ್ರಾಣವನ್ನೇ ಅರ್ಪಿಸಿದ. ಜಗತ್ತಿನ ಕಲ್ಯಾಣಕ್ಕಾಗಿ – ಅದಕ್ಕೆ ಈ ಶುಕ್ರವಾರವನ್ನು **ಗುಡ್‌ಫ್ರೈಡೇ** ಎನ್ನುವರು.

**ಪ್ರಶ್ನೆ:** ಆ ದಿನಗಳಲ್ಲಿ ಜಂಟೈಲರ (gentile) ಹತ್ಯೆ ನಡೆದಿತ್ತು.

**ಮಹಾರಾಜ್:** ಆ ಕಾಲದಲ್ಲಿ ಅವರೇ ಸಭ್ಯರಾಗಿದ್ದರು. ಅವರು ಯೆಹೂದ್ಯರನ್ನು ಮನುಷ್ಯರೆಂದೇ ಪರಿಗಣಿಸುತ್ತಿರಲಿಲ್ಲ. ಅವರು ರಾಜನ ಕಡೆಯವರು. ಯಹೂದ್ಯರು ಪರಾಧೀನರು. ಇದು ಹೇಗೆಂದರೆ ಇಂಗ್ಲೀಷರು, ಭಾರತೀಯರನ್ನು ಮನುಷ್ಯರೆಂದು ಪರಿಗಣಿಸುತ್ತಿರಲಿಲ್ಲ, ಅದೇ ರೀತಿ.

**ಪ್ರಶ್ನೆ:** ಗೀತೆಯ 'ದೈವಾಸುರಸಂಪದ್ವಿಭಾಗಯೋಗ' ಅಧ್ಯಾಯದಲ್ಲಿ ಒಂದು ಶ್ಲೋಕವಿದೆ:

> **ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
> **ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥** *(೧೬-೩)*

ಇಲ್ಲಿ '**ನಾತಿಮಾನಿತಾ**' ಎಂದರೇನು?

**ಮಹಾರಾಜ್:** ಅತಿಮಾನಿತಾ ಎಂದರೆ ದಂಭ. ಅದು ಉಳ್ಳವನೇ ಸ್ವಾರ್ಥಿ. ಅದರ ಅಭಾವವೇ '**ನಾತಿಮಾನಿತಾ**'

**ಪ್ರಶ್ನೆ:** 'ಅತಿಮಾನಿತ'ದ 'ಅತಿ'ಯ ಅಗತ್ಯವಿಲ್ಲ; 'ಮಾನಿತ' ಇರುತ್ತದೆ, ಅರ್ಥಾತ್ ಸ್ವಲ್ಪ ಅಹಂಕಾರವಿರುತ್ತದೆ. ಹಾಗೆ ತಾನೆ?

**ಮಹಾರಾಜ್:** ದಂಭ ಇರುವುದಿಲ್ಲ. ವಾದ ಮಾಡುವಾಗ, ನಾನೇನು ಹೇಳುತ್ತೇನೋ ಅದೇ ಸರಿ ಎಂದು ನಾವು ಭಾವಿಸುತ್ತೇವೆ. ಇತರರು ಹೇಳುವುದೆಲ್ಲ ತಪ್ಪು ಎಂದು ನಮ್ಮ ಭಾವನೆ.

**ಪ್ರಶ್ನೆ:** ಹಾಗಾದರೆ ಹೇಗಿರಬೇಕು, ಮಹಾರಾಜ್?

**ಮಹಾರಾಜ್:** ವಿನಯವಿರಬೇಕು.

**ಪ್ರಶ್ನೆ:** ಸ್ವಾಮೀಜಿ ಮನೆಯಲ್ಲಿದ್ದಾಗ, ಸಂಸಾರದಲ್ಲಿ ಬಡತನದಿಂದಾಗಿ ಬಹಳ ಕಷ್ಟಪಟ್ಟರು. ಒಂದು ದಿನ ಠಾಕೂರರಿಗೆ, 'ನಿಮ್ಮ ತಾಯಿ ಕಾಳಿಗೆ ಹೇಳಿ, ನನ್ನ ಮನೆಗೆ ಏನಾದರೂ ವ್ಯವಸ್ಥೆ ಮಾಡುವಂತೆ' ಎಂದರು. ಅದಕ್ಕೆ ಠಾಕೂರ್, 'ನೀನು ತಾಯಿಯನ್ನು ಸ್ವೀಕರಿಸಿಲ್ಲ , ಅದಕ್ಕಾಗಿ ಇಷ್ಟು ಕಷ್ಟ' ಎಂದರು. ಇದರ ಅರ್ಥ ವಿವರಿಸಿ, ಮಹಾರಾಜ್.

**ಮಹಾರಾಜ್:** ತಾಯಿಯನ್ನು ಸ್ವೀಕರಿಸುತ್ತಿದ್ದರೆ ಆಕೆ ಅವರ ಕಷ್ಟವನ್ನು ದೂರ ಮಾಡುತ್ತಿದ್ದಳು.

**ಪ್ರಶ್ನೆ:** ಸ್ವಾಮೀಜಿಗೆ ದೇವರ ಮೇಲೆ ವಿಶ್ವಾಸವಿರಲಿಲ್ಲವೆ? ಅವರೇ ಹೇಳುತ್ತಾರೆ, 'ಎಷ್ಟೊಂದು ಬಾರಿ ಭಗವಂತನನ್ನು ಕರೆದೆ!' ಎಂದು.

**ಮಹಾರಾಜ್:** ಭಗವಂತ ಮತ್ತು ಶಕ್ತಿ ಒಂದೇ ಏನು? ಭಗವಂತನೇ ತಾಯಿ ಎಂಬ ವಿಶ್ವಾಸ ಹೊಂದಿದರೆ, ಸಾಧಕನಿಗೆ ಭಗವಂತನ ಮಾತೃಭಾವ ಬಂದು, ಆ ಭಾವವನ್ನು ವಿಶೇಷವಾಗಿ ಪ್ರಕಾಶಪಡಿಸುತ್ತಾನೆ. ಆಕೆಯ ವಾತ್ಸಲ್ಯ ಭಾವ ಸಾಧಕನಲ್ಲಿ ವೃದ್ಧಿಸುತ್ತದೆ. ತಾಯಿ ಮಗುವಿನ ಕಷ್ಟವನ್ನು ಸಹಿಸಲಾರಳು; ಕಷ್ಟವನ್ನು ದೂರ ಮಾಡಿಬಿಡುತ್ತಾಳೆ. ಹಾಗೆ ಸ್ವಾಮೀಜಿ ತಾಯಿಯನ್ನು ಮನ್ನಿಸುತ್ತಿದ್ದರೆ, ಅವರ ಕಷ್ಟವನ್ನು ತಾಯಿ ದೂರ ಮಾಡುತ್ತಿದ್ದಳು.

**ಪ್ರಶ್ನೆ:** ಠಾಕೂರ್ ಹೇಳುತ್ತಿದ್ದರು, ಮನುಷ್ಯನಾಗಬೇಕಾದರೆ, 'ಮಾನ್-ಹುಶ್' ಆಗಬೇಕೆಂದು, ಇದರ ಅರ್ಥವೇನು?

**ಮಹಾರಾಜ್:** ಕರ್ತವ್ಯದ ಪ್ರಜ್ಞೆ ಇರುವುದು. ಅಂದರೆ ಮನುಷ್ಯನಾಗಿ ಹುಟ್ಟಿ ಭಗವತ್ ಸಾಕ್ಷಾತ್ಕಾರಕ್ಕೆ ಪ್ರಯತ್ನ ಪಡುವುದೇ ಕರ್ತವ್ಯ. ಅದೇ ಕರ್ತವ್ಯ ಪ್ರಜ್ಞೆ.

**ಪ್ರಶ್ನೆ:** ಶ್ರೀಮಾತೆಯವರು ಒಂದು ಕಡೆ ಹೇಳುತ್ತಾರೆ, ಮಂತ್ರ, ತಂತ್ರ ಯಾವುದೂ ಬೇಡ, ಭಕ್ತಿ ಒಂದೇ ಸಾಕು ಎಂದು. ಇದರ ತಾತ್ಪರ್ಯವೇನೆಂದು ವಿವರಿಸಿ ಮಹಾರಾಜ್.

**ಮಹಾರಾಜ್:** ಇದನ್ನು context (ಸಂದರ್ಭ) ನೋಡಿ ಅರ್ಥ ಮಾಡಿಕೊಳ್ಳಬೇಕು. ಇನ್ನೊಂದು ಕಡೆ (ತಂತ್ರದ ಸಂಬಂಧವಾಗಿ) ಶ್ರೀಮಾತೆಯವರು ಹೇಳುತ್ತಾರೆ, ಇದನ್ನೆಲ್ಲ ಮನ್ನಿಸಬೇಕು ಎಂದು.

**ಪ್ರಶ್ನೆ:** ಹಾಗಾದರೆ ಈ ಮಾತಿನ ಅರ್ಥವೇನು?

**ಮಹಾರಾಜ್:** ಇಲ್ಲಿ ಮಂತ್ರವೆಂದರೆ, ದೀಕ್ಷಾಮಂತ್ರವಲ್ಲ. Ritual (ಪೂಜೆ, ವಿಧಿ-ನಿಷೇಧಗಳ) ಅಂದರೆ ಮಂತ್ರ, ಯಾಗ ಯಜ್ಞಾದಿಗಳ ಮಂತ್ರ. ಈ ಮಂತ್ರಗಳಿಂದ ಏನೂ ಪ್ರಯೋಜನವಾಗುವುದಿಲ್ಲ – ಭಗವತ್ಪ್ರೇಮ ಉಂಟಾಗುವುದಿಲ್ಲ. ಭಗವಂತನಲ್ಲಿ ಪ್ರೀತಿ ಎಂದರೆ ಭಕ್ತಿ. ಶ್ರೀಮಾತೆ ಹಾಗೆ ಹೇಳಿರುವುದು ಈ ಅರ್ಥದಲ್ಲಿ.

**ಪ್ರಶ್ನೆ:** ಠಾಕೂರ್ ಶ್ರೀಮಾತೆಯವರ ಬಗ್ಗೆ ಹೇಳುತ್ತಾರೆ, 'ಅವಳು ಶಾರದೆ, ಸರಸ್ವತಿ. ಜ್ಞಾನೋಪದೇಶ ಮಾಡಲು ಬಂದಿದ್ದಾಳೆ' ಎಂದು. ಆದರೆ ಶ್ರೀಮಾತೆಯವರ ಮಾತುಗಳಲ್ಲಿ ಎಲ್ಲೂ ಜ್ಞಾನದ ವಿಚಾರಗಳು ಸಿಗುವುದಿಲ್ಲ ; ಜಪ, ಭಕ್ತಿ ಇವೆಲ್ಲ ಸಿಗುತ್ತವೆ.

**ಮಹಾರಾಜ್:** ಜ್ಞಾನ ಎಂದರೆ ಏನೆಂದು ಅರ್ಥಮಾಡಿಕೊಂಡಿರುವೆ? ಶಂಕರಾಚಾರ್ಯರ ಉಪನಿಷತ್ ಭಾಷ್ಯವೆ? ಶ್ರೀಮಾತೆಯವರು ಇವುಗಳನ್ನು ಕೇಳಿಯೇ ಇಲ್ಲ. ಅವರಿಗೆ ಓದುವುದೂ ಬರುತ್ತಿರಲಿಲ್ಲ. ಜ್ಞಾನವೆಂದರೆ, ಯಾರಲ್ಲಿ essential features of divinity (ಆಧ್ಯಾತ್ಮಿಕ ಸ್ವಭಾವದ ಸಾರ) ಕಂಡುಬರುವುದೋ ಅದು. ಯಾರ ಮೂಲಕ ಅಧ್ಯಾತ್ಮಜ್ಞಾನ ಲಭಿಸುವುದೋ, ಅದು. ಆ ಉಪಾಯ ಇತರರಿಗೆ ಹೇಳಿಕೊಡುವಂತದ್ದು. ಶ್ರೀಮಾತೆಯವರ ಜೀವನದಲ್ಲಿ ಈ ವಿಚಾರವೇ ತುಂಬಿ ಹೋಗಿವೆ.

**ಪ್ರಶ್ನೆ:** ಶ್ರೀರಾಮಕೃಷ್ಣರು ಸ್ವಾಮೀಜಿಗೆ ಹೇಳುತ್ತಿದ್ದರು, ನಿರ್ವಿಕಲ್ಪ ಸ್ಥಿತಿಗಿಂತಲೂ ಉಚ್ಚ ಅವಸ್ಥೆ ಇದೆ ಎಂದು. ಅದು ಯಾವ ಅವಸ್ಥೆ ?

**ಮಹಾರಾಜ್:** ಸ್ವತಃ ತನಗೆ ಸಮಾಧಿ ಸಿದ್ಧಿಸಿದ ನಂತರ ಉಳಿದವರಿಗೆ ಆ ಸ್ಥಿತಿಗೇರಲು ಸಹಾಯ ಮಾಡುವುದು. ಅಂದರೆ, ಸರ್ವಭೂತ ಗಳಲ್ಲಿಯೂ ಬ್ರಹ್ಮದರ್ಶನ ಮಾಡಿ, ಅವುಗಳ ಸೇವೆ ಮಾಡುವುದು.

**ಪ್ರಶ್ನೆ:** ಮಹಾರಾಜರೆ, ತೀರ್ಥಕ್ಷೇತ್ರಗಳಲ್ಲಿ ಒಂದು spiritual current (ಆಧ್ಯಾತ್ಮಿಕ ತರಂಗ) ಇರುತ್ತದೆ ಎಂದು ಹೇಳುತ್ತಾರೆ. ಈ Spiritual current ಎಂದರೇನು ?

**ಮಹಾರಾಜ್:** ಮೊದಲು ನಿನ್ನ ಆಧ್ಯಾತ್ಮಿಕ ಆಧಾರವನ್ನು ಬಲ ಪಡಿಸು. ಸ್ವತಃ ನಾನೇ spiritual ಆಗದಿದ್ದರೆ, spiritual current ಅನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ಸ್ಥಾನಮಹಾತ್ಮ್ಯೆ ಎನ್ನು ವುದು ಖಂಡಿತ ಇದೆ.

ಈ ಸಂದರ್ಭದಲ್ಲಿ ಒಂದು ವಿಚಾರ ನೆನಪಿಗೆ ಬರುತ್ತದೆ. ನಾವು 'ಏತತ್ ಕರ್ಮ ಶ್ರೀರಾಮಕೃಷ್ಣಾರ್ಪಣಮಸ್ತು' ಎಂದು ಹೇಳಿ ಕರ್ಮಸಮರ್ಪಣೆ ಮಾಡುತ್ತೇವೆ. ಏಕೆ ಮಾಡುತ್ತೇವೆ ಗೊತ್ತೆ? ನಾವು ಏನನ್ನು ಅರ್ಪಿಸುತ್ತೇವೊ, ಅದರ ನೂರರಷ್ಟು , ಸಾವಿರದಷ್ಟು ಫಲ ಪ್ರಾಪ್ತಿ ಆಗುತ್ತದೆ ಎಂದು. ಇದು ಹೇಗೆಂದರೆ, ಒಂದು ಭತ್ತದ ಕಾಳನ್ನು ಬಿತ್ತಿದ ಹಾಗೆ. ಒಂದೇ ಕಾಳನ್ನು ಬಿತ್ತಿದರೂ, ಅದರಿಂದ ನಮಗೆ ಸಾವಿರ ಪಟ್ಟು ಪ್ರಾಪ್ತಿ ಆಗುತ್ತದೆ. ಅದಕ್ಕೆ ಬದಲಾಗಿ, 'ನಾನು ಅಷ್ಟಿಷ್ಟು ಕಷ್ಟ ಪಟ್ಟು ಆರ್ಜಿಸಿದ್ದೇನೆ, ಅದನ್ನು ಕೊಡಲೆ?' ಎಂದು ಭಾವಿಸುವುದೆ?

**ಪ್ರಶ್ನೆ:** ಯಾವ ಕರ್ಮ ಹಿಂದಕ್ಕೆ ಬರುವುದು? ಒಳ್ಳೆಯದೆ, ಕೆಟ್ಟದ್ದೆ?

**ಮಹಾರಾಜ್:** ನೀನು ಏನನ್ನು ಕೊಡುತ್ತೀಯೋ, ಅದೇ ನಿನಗೆ ಸಿಗು ತ್ತದೆ. ಒಳ್ಳೆಯದನ್ನಿತ್ತರೆ ಒಳ್ಳೆಯದು, ಕೆಟ್ಟದ್ದನ್ನು ಕೊಟ್ಟರೆ ಕೆಟ್ಟದ್ದು.

**ಪ್ರಶ್ನೆ:** ಸ್ವಾಮೀಜಿ ಹೇಳುತ್ತಾರೆ, ''Education is the manifestation of the perfection already in man'' ಮತ್ತು ''Religion is the manifestation of the divinity already in man'' ಎಂದು. ಇಲ್ಲಿ perfection ಮತ್ತು divinity ಇವುಗಳ ಅರ್ಥವೇನು?

**ಮಹಾರಾಜ್:** Perfection ಎಂದರೆ ವ್ಯಾವಹಾರಿಕ ಜಗತ್ತಿನಲ್ಲಿ ಬುದ್ಧಿವಂತಿಕೆಯಿಂದ ಜವಾಬ್ದಾರಿಯನ್ನು ಹೊರುವುದು. ಇನ್ನು divinity ಎಂಬುದು ಆಧ್ಯಾತ್ಮಿಕ ಜಗತ್ತಿನಲ್ಲಿ.

**ಪ್ರಶ್ನೆ:** ಇವೆರಡಕ್ಕೂ ಒಂದೇ ರೀತಿಯ concentration (ಏಕಾ ಗ್ರತೆ) ಬೇಕಲ್ಲವೆ, ಮಹಾರಾಜ್?

**ಮಹಾರಾಜ್:** ಹೌದು, ಬೇಕು.

**ಪ್ರಶ್ನೆ:** ಹಾಗಾದರೆ ವ್ಯಾವಹಾರಿಕ ಜಗತ್ತಿನಲ್ಲಿ ನಿರತರಾದ ವ್ಯಕ್ತಿಗಳು ಕೂಡ ಆಧ್ಯಾತ್ಮಿಕ ಮಾರ್ಗದಲ್ಲಿ ಉನ್ನತಿ ಪಡೆಯಲು ಸಾಧ್ಯ. ವ್ಯಾವ ಹಾರಿಕ ಜಗತ್ತಿನಲ್ಲಿ ವಿಷಯಗಳಲ್ಲಿ ಏಕಾಗ್ರತೆ ಸಾಧಿಸಿದವರು ಆಧ್ಯಾ ತ್ಮಿಕ ವಿಚಾರಗಳಲ್ಲಿಯೂ ಏಕಾಗ್ರತೆ ಪಡೆಯಬಲ್ಲರು.

**ಮಹಾರಾಜ್:** ವ್ಯಾವಹಾರಿಕ ವಿಷಯಗಳಲ್ಲಿ ಏಕಾಗ್ರತೆ ಪಡೆದವರು ಆಧ್ಯಾತ್ಮಿಕ ಜಗತ್ತಿನಲ್ಲಿಯೂ ಅದನ್ನು ಪಡೆಯುತ್ತಾರೆಂದು ಹೇಳುವ ಹಾಗಿಲ್ಲ. ಹೇಗೆಂದರೆ, ಒಬ್ಬ ಪ್ರಸಿದ್ಧ ಡಾಕ್ಟರ್ ಆಧ್ಯಾತ್ಮಿಕತೆಯಲ್ಲಿ ಏನೂ ಆಗದಿರಬಹುದು.

**ಪ್ರಶ್ನೆ:** ಯಾಕೆ ಆಗಲಾರ ಮಹಾರಾಜ್?

**ಮಹಾರಾಜ್:** ಕಾರಣವಿಷ್ಟೆ – ವ್ಯಾವಹಾರಿಕ ಜಗತ್ತಿನಲ್ಲಿ ಏಕಾಗ್ರತೆ ಗಾಗಿ purity ಯ (ಪವಿತ್ರತೆ) ಆವಶ್ಯಕತೆ ಇಲ್ಲ, ಆದರೆ ಆಧ್ಯಾತ್ಮಿಕ ವಿಚಾರಗಳಿಗೆ ಪವಿತ್ರತೆ ಅತಿ ಅವಶ್ಯವಾಗಿ ಬೇಕು.

**ಪ್ರಶ್ನೆ:** ಹಾಗಾದರೆ ಡಾಕ್ಟರರಂತಹ ವ್ಯಕ್ತಿಗಳಿಗೆ ಆಧ್ಯಾತ್ಮಿಕ ವಿಚಾರದಲ್ಲಿ ಏಕಾಗ್ರತೆ ಬರಲು ಸಾಧ್ಯವಿಲ್ಲವೆ?

**ಮಹಾರಾಜ್:** ಹಾಂ, ಸಾಧ್ಯವಿದೆ.

**ಪ್ರಶ್ನೆ:** ಯಾವ ರೀತಿ?

**ಮಹಾರಾಜ್:** ಅಭ್ಯಾಸದ ಮೂಲಕ ಮತ್ತು ಪವಿತ್ರತೆಯಿಂದ. ವ್ಯಾವಹಾರಿಕ ಜಗತ್ತಿನಲ್ಲಿ ಎಷ್ಟೊಂದು ಏಕಾಗ್ರತೆ ಸಾಧಿಸುತ್ತಾರೆಂದರೆ, ಜಗತ್ತಿನ ಪ್ರಜ್ಞೆಯೇ ಅವರಿಗೆ ಇರುವುದಿಲ್ಲ. ನಾನು ಕೇಳಿದ್ದೇನೆ, ವಿಜ್ಞಾನಿ ಜಗದೀಶ್ಚಂದ್ರ ಬೋಸ್ ಅವರು ಒಂದು ವೈಜ್ಞಾನಿಕ ವಿಷಯ ವಾಗಿ ಎಷ್ಟೊಂದು ತಲ್ಲೀನರಾಗಿದ್ದರೆಂದರೆ, ಅವರ ವಿದ್ಯಾರ್ಥಿಯೊಬ್ಬ ಅವರನ್ನು ನೋಡಲು ಅವರ ಬಳಿಗೆ ಹೋದಾಗ, ಬೋಸರಿಗೆ ಆ ಕಡೆ ಗಮನವೇ ಇರಲಿಲ್ಲವಂತೆ. ಅವರು ಅಷ್ಟೊಂದು ತನ್ಮಯರಾಗಿದ್ದರು. ಅನಂತರ ಅರಿವಿಗೆ ಬಂದ ಮೇಲೆ, ವಿದ್ಯಾರ್ಥಿಯನ್ನು ನೋಡಿ, ''ಎಷ್ಟು ಹೊತ್ತಿಗೆ ಬಂದಿದ್ದೆ?'' ಎಂದು ವಿಚಾರಿಸಿದರು. ಹೀಗೆ ವೈಜ್ಞಾ ನಿಕ ವಿಷಯದಲ್ಲಿ ಒಬ್ಬ ತನ್ಮಯನಾದನೆಂದು, ಅದೇ ರೀತಿ ಆತ ಆಧ್ಯಾ ತ್ಮಿಕತೆಯಲ್ಲೂ ತನ್ಮಯನಾಗುತ್ತಾನೆಂದು ಹೇಳಲಾಗುವುದಿಲ್ಲ. ✷

## ಕಿಟಿಕಿ ಸ್ವಚ್ಛವಿರಲಿ

ಒಬ್ಬ ಮುದುಕ ತನ್ನ ಮನೆಯಲ್ಲಿ ಒಬ್ಬಂಟಿಯಾಗಿ ಕುಳಿತಿದ್ದ. ತನ್ನ ನೆರೆಮನೆಯ ಹೆಂಗುಸಿಗೆ ಹೇಳಿದ, ''ನನ್ನ ಕೊನೆ ಸಮೀಪಿ ಸುತ್ತಿದೆ. ನನ್ನ ಕಣ್ಣುಗಳು ಮಂಜಾಗಿವೆ. ಈ ಕಿಟಿಕಿಯ ಮೂಲಕ ನಾನು ಪ್ರಪಂಚದ ಸೌಂದರ್ಯವನ್ನು ನೋಡಲಾರೆ.'' ಅವನ ಮುಂದಿದ್ದ ಕಿಟಿಕಿ ಧೂಳು, ಕಸ, ಕೊಳೆಗಳಿಂದ ತುಂಬಿಕೊಂಡಿತ್ತು. ಅದನ್ನು ಗಮನಿಸಿದ ಹೆಂಗಸು ಆ ಕಿಟಿಕಿಯನ್ನು ಸಾಬೂನಿನಿಂದ ತೊಳೆದು, ಬಟ್ಟೆಯಿಂದ ಸ್ವಚ್ಛಗೊಳಿಸಿದಳು. ಮುದುಕ ಹೊರಗಿನ ಸುಂದರ ದೃಶ್ಯವನ್ನು ಸ್ಪಷ್ಟವಾಗಿ ನೋಡಿ ಆನಂದಗೊಂಡ. ಆ ಹೆಂಗಸು ಅವನಿಗೆ, ''ನಿನ್ನ ಕಣ್ಣು ಮಂಜಾಗಿಲ್ಲ, ನಿನ್ನ ಕಿಟಿಕಿ ಕೊಳೆಯಾಗಿದ್ದವು, ಅಷ್ಟೆ. ನೀನೇಕೆ ಅದನ್ನು ಕೊಳೆಯಾಗಲು ಬಿಟ್ಟೆ?'' ಎಂದಳು.

ನಮ್ಮ ಅಂತರಂಗದ ಕಿಟಿಕಿ ಕೊಳೆಯಾಗದಂತೆ ನೋಡಿ ಕೊಳ್ಳೋಣ. ಆ ಮೂಲಕ ಸದಾ ಭಗವಂತನ ದರ್ಶನವನ್ನು ಹೊಂದೋಣ. ನಾವು ಎಲ್ಲೇ ಹೋದರೂ ಅಲ್ಲೆಲ್ಲ ಪ್ರೀತಿ, ಸೇವೆಗಳ ಬೆಳಕನ್ನು ಹಚ್ಚೋಣ.

*(ಜೆ.ಪಿ. ವಾಸ್ವಾನಿಯವರ 'Snack for the Soul' ಗ್ರಂಥದಿಂದ)*

# ಯೋಗವಾಸಿಷ್ಠದ ಕಥೆಗಳು



**ಸ್ವಾಮಿ ವೀರೇಶಾನಂದ**

**ಕಥಾಗುಚ್ಛ - ೬**

## ಸಿದ್ಧನ ಕಥೆ

**ವ**ಸಿಷ್ಠರು ರಾಮನಿಗೆ ತಮ್ಮ ಉಪದೇಶವನ್ನು ಮುಂದುವರೆಸುತ್ತಿದ್ದಾರೆ:

ರಾಮ, ಮನಸ್ಸಿಗೆ ಯಾವುದೇ ರೀತಿಯ ಸ್ವತಂತ್ರ ಅಸ್ತಿತ್ವವೂ ಇಲ್ಲವಪ್ಪಾ. ಅಲೆಗಳು ಕಡಲಿನ ಮೇಲೆ ನಿರ್ಭರವಾಗಿರುವಂತೆ, ಮನಸ್ಸು ಪರಮಾತ್ಮನನ್ನೇ ಅವಲಂಬಿಸಿರುತ್ತದೆ. ಈ ಮನಸ್ಸೆಂಬುದು ಯಾವಾಗಲೂ ಪರಿವರ್ತನಶೀಲವಾಗಿಯೇ ಇರುತ್ತದೆ. ಅದು ಸ್ನೇಹಿತನನ್ನು ಶತ್ರುವನ್ನಾಗಿ ಪರಿವರ್ತಿಸುತ್ತದೆ; ಶತ್ರುವನ್ನು ಸ್ನೇಹಿತನನ್ನಾಗಿ ಪರಿವರ್ತಿಸುತ್ತದೆ. ಮಹಾತ್ಮರನ್ನು ನೀಚರನ್ನಾಗಿಸುತ್ತದೆ; ನೀಚರನ್ನು ಮಹಾತ್ಮರನ್ನಾಗಿಸುತ್ತದೆ. ಒಮ್ಮೆ ಒಂದು ಭಾವದಲ್ಲಿದ್ದರೆ, ಇನ್ನೊಮ್ಮೆ ಇನ್ನೊಂದು ಭಾವದಲ್ಲಿರುತ್ತದೆ. ಇದು ಸತ್ಯವನ್ನು ಅಸತ್ಯವೆಂದು ಪರಿಗಣಿಸುತ್ತದೆ; ಅಸತ್ಯವನ್ನು ಸತ್ಯವೆಂದು ಪರಿಗಣಿಸುತ್ತದೆ. ನೋವು-ನಲಿವು, ಸುಃಖ-ದುಃಖ ಇವೆಲ್ಲವೂ ಮನಸ್ಸಿನ ಸೃಷ್ಟಿಯಲ್ಲದೆ ಬೇರೆಯಲ್ಲ. ಹಾಗೆಯೇ ಒಳ್ಳೆಯ ಮತ್ತು ಕೆಟ್ಟ ಕೆಲಸಗಳ ಫಲವನ್ನು ಉಣ್ಣುವುದೂ ಮನಸ್ಸೇ.

ನಾವು ವಸ್ತುವನ್ನು ನೋಡುತ್ತೇವೆ ಎಂದುಕೊಳ್ಳುತ್ತೇವಲ್ಲ, ಅದು ಮನಸ್ಸಿನ ಸೃಷ್ಟಿ. ಹೊರಗಡೆ ಏನೂ ಇಲ್ಲವೇ ಇಲ್ಲ. ನಾವು ನೋಡುವುದು, ಭಾವಿಸುವುದು, ರುಚಿ ನೋಡುವುದು, ಮೂಸಿ ನೋಡುವುದು - ಇವೆಲ್ಲವೂ ಮನಸ್ಸಿನ ಕ್ರಿಯೆಗಳು ಮಾತ್ರ. ಕಾಲ, ದೂರ, ಸ್ಥಳ, ಆಳತೆ, ಅಗಲ, ಎತ್ತರ, ಶೀಘ್ರ, ನಿಧಾನ, ಕಪ್ಪು, ಕೆಂಪು - ಇವೆಲ್ಲ ಉಂಟಾಗುವುದು ಮನಸ್ಸಿನಲ್ಲಿಯೇ. ಇವೆಲ್ಲವೂ ಸೇರಿದ್ದು ಮನಸ್ಸಿಗೇ.

ರಾಮ, ವಿಷಯವಸ್ತುಗಳ ಚಿಂತನೆ ಬಂಧನವನ್ನು ಉಂಟುಮಾಡುತ್ತದೆ. ಅಂಥ ಆಲೋಚನೆಗಳ ತ್ಯಾಗವೇ ಮುಕ್ತಿ. ಈ ಪ್ರಪಂಚ ಎಂದರೆ ಏನು ಎಂದುಕೊಂಡಿದ್ದೀಯೆ? ನಮ್ಮ ಮನಸ್ಸಿನ ಆಲೋಚನೆಗಳ ವಿಕಸನವೇ ಈ ಜಗತ್ತು. ಈ ವಿಶ್ವವೆಂಬುದು ದೊಡ್ಡ ನಾಟಕ ಪ್ರದರ್ಶನ ಮಾತ್ರ. ಈ ಪ್ರದರ್ಶನ ನಡೆಯುವುದು ಮನಸ್ಸೆಂಬ ನಾಟಕಶಾಲೆಯಲ್ಲಿ. ಋತುಮಾನದ ಪ್ರಕಾರ ಗಿಡಮರಗಳಲ್ಲಿ ಪರಿವರ್ತನೆ ಉಂಟಾಗುವುದಷ್ಟೇ. ಅದೇ ರೀತಿ, ಜೀವಿಗಳಲ್ಲಿ ವೈವಿಧ್ಯವನ್ನು ಉಂಟುಮಾಡುವುದೂ ಮನಸ್ಸೇ. ಈ ಜಗತ್ತಿನಲ್ಲಿ ಎಷ್ಟು ಬಗೆಯ ಮನುಷ್ಯರಿದ್ದಾರೋ, ಅಷ್ಟು ಬಗೆಯ ಮನಸ್ಸುಗಳಿವೆ. ಒಂದೇ ಮನಸ್ಸನ್ನು ಹೊಂದಿರುವ ಇಬ್ಬರು ವ್ಯಕ್ತಿಗಳು ಎಂದೂ ಕಾಣಸಿಗುವುದಿಲ್ಲ.

ಮನಸ್ಸು ವಿಷಯವಸ್ತುಗಳಲ್ಲಿ ಆಟವಾಡುತ್ತದೆ. ಮನಸ್ಸಿನ ಲೀಲೆಯ ಮೂಲಕ ಹತ್ತಿರವಿರುವುದು ದೂರದಲ್ಲಿರುವಂತೆ ಕಂಡುಬರುತ್ತದೆ; ದೂರವಿರುವುದು ಹತ್ತಿರದಲ್ಲಿರುವಂತೆ ಕಂಡುಬರುತ್ತದೆ; ಒಂದು ಕಲ್ಪದಷ್ಟು ದೀರ್ಘ ಕಾಲಾವಧಿಯು ಒಂದು ಕ್ಷಣದಂತೆ ಕಂಡುಬರುತ್ತದೆ. ಒಂದು ಕ್ಷಣವು ಅತಿ ದೀರ್ಘಕಾಲದಂತೆ ಕಂಡುಬರುತ್ತದೆ. ಈ ವಿಷಯವನ್ನು ಇನ್ನಷ್ಟು ಸ್ಪಷ್ಟವಾಗಿ ಬಿಂಬಿಸಲು ನಾನು ನಿನಗೊಂದು ಕಥೆಯನ್ನು ಹೇಳುತ್ತೇನೆ. ರಾಮ, ಇದನ್ನು ಮನಗೊಟ್ಟು ಕೇಳು.

ಲವಣ ಎನ್ನುವ ರಾಜನಿದ್ದನು. ಅವನು ಹರಿಶ್ಚಂದ್ರನ ವಂಶದಲ್ಲಿ ಹುಟ್ಟಿದವನು; ಉತ್ತರ ಪಾಂಡವ ಎನ್ನುವ ರಾಜ್ಯವನ್ನು ಆಳುತ್ತಿದ್ದನು. ಅವನೊಬ್ಬ ಬಹು ದೊಡ್ಡ ರಾಜ. ವೈಭವಯುತವಾಗಿ ರಾಜ್ಯಭಾರ ಮಾಡುತ್ತಿದ್ದನು. ಧರ್ಮವಂತನಾಗಿ ನಡೆದುಕೊಳ್ಳುತ್ತಿದ್ದನು.

ಒಮ್ಮೆ ಲವಣನು ಆಸ್ಥಾನದಲ್ಲಿ ತನ್ನ ಸಿಂಹಾಸನದ ಮೇಲೆ ಕುಳಿತುಕೊಂಡಿದ್ದನು. ಅವನ ಮಂತ್ರಿಗಳು, ಅಧಿಕಾರಿಗಳು ಅವನನ್ನು ಸುತ್ತುವರೆದಿದ್ದರು. ಆಗ ಒಬ್ಬ ಮಾಂತ್ರಿಕ ಸಿದ್ಧನು ಅಲ್ಲಿಗೆ ಬಂದನು. ರಾಜನಿಗೆ ತಲೆಬಾಗಿ ಹೀಗೆ ನಿವೇದಿಸಿಕೊಂಡನು: ''ಪ್ರಭೂ, ನಾನು ಅದ್ಭುತವಾದ ಇಂದ್ರಜಾಲವನ್ನು ತೋರಿಸಬಲ್ಲೆ. ದಯವಿಟ್ಟು ಅದನ್ನು ವೀಕ್ಷಿಸುವ ಕೃಪೆ ಮಾಡು.''

ಆ ಸಿದ್ಧನು ನವಿಲಿನ ಗರಿಗಳ ಒಂದು ಗುಚ್ಛವನ್ನು ಸುಮ್ಮನೆ ಗಾಳಿಯಲ್ಲಿ ಆಡಿಸಿದನು. ಒಡನೆ ರಾಜನಿಗೆ ಈ ಕೆಳಕಂಡಂತೆ ಅದ್ಭುತ ಅನುಭವವಾಯಿತು:

ಸಿಂಧು ದೇಶದ ರಾಜನು ಒಂದು ಪ್ರಶಸ್ತವಾದ ಕುದುರೆಯೊಂದನ್ನು ತನ್ನ ದೂತನ ಮುಖಾಂತರ ಕಳಿಸಿದ್ದಾನೆ. ಆ ಕುದುರೆಯು ಇಂದ್ರನ ಕುದುರೆಯ ಹಾಗೆ ಬಹಳ ಶ್ರೇಷ್ಠವಾದುದು. ಆ ದೂತನು ಹೀಗೆ ಹೇಳುತ್ತಿದ್ದಾನೆ: 'ಪ್ರಭೂ, ನನ್ನ ರಾಜನು ನಿನಗೆ ಈ ಕಾಣಿಕೆಯನ್ನು ಕಳಿಸಿಕೊಟ್ಟಿದ್ದಾನೆ. ದಯವಿಟ್ಟು ಸ್ವೀಕರಿಸಿ.'

ಮಾಂತ್ರಿಕ ಸಿದ್ಧನು ಆ ಕುದುರೆಯನ್ನು ಏರುವಂತೆ ರಾಜನನ್ನು ಕೇಳಿಕೊಂಡನು; ಇಚ್ಛೆ ಬಂದಷ್ಟು ವಿಹಾರವನ್ನು ಮಾಡುವಂತೆ ವಿನಂತಿಸಿಕೊಂಡನು. ರಾಜನು ಆ ಕುದುರೆಯನ್ನು ಏರಿದನು. ಹೊರಗಿನವರಿಗೆ ಇದಾವುದೂ ಕಾಣಿಸುತ್ತಿರಲಿಲ್ಲ. ರಾಜನು ಮೂರ್ಛೆ ಹೋದದ್ದು ಕಾಣಿಸುತ್ತಿತ್ತು. ರಾಜನು ಎರಡು ಗಂಟೆಗಳ ಕಾಲ

ಪ್ರಜ್ಞಾಶೂನ್ಯನಾಗಿಯೇ ಇದ್ದನು. ಅನಂತರ ಮರಗಟ್ಟಿದ್ದ ಅವನ ಶರೀರದಲ್ಲಿ ಚೇತನವು ಮತ್ತೆ ಪ್ರವೇಶಿಸಿತು. ಅವನು ಸಿಂಹಾಸನದಿಂದ ಥೊಪ್ಪನೆ ಬಿದ್ದನು. ಅವನ ಸೇವಕರು ಅವನನ್ನು ಎತ್ತಿಕೊಂಡು ಹೋಗಿ ಮಲಗಿಸಿದರು. ಸ್ವಲ್ಪಹೊತ್ತಿನಲ್ಲಿಯೇ ಅವನಿಗೆ ಬಾಹ್ಯಪ್ರಜ್ಞೆ ಮರುಕಳಿಸಿತು. ಅವನು ಕಣ್ಣುಬಿಟ್ಟನು. ಮಂತ್ರಿಗಳು ಮತ್ತು ಸಭಿಕರು ಕಾತರದಿಂದ ಕೇಳಿದರು, ''ಮಹಾಪ್ರಭು, ಏನಾಯಿತು?'' ಅದಕ್ಕೆ ರಾಜನು ಹೀಗೆ ಉತ್ತರವಿತ್ತನು:

### ರಾಜನ ಅನುಭವ

''ಸಿದ್ಧನು ನವಿಲುಗರಿಗಳ ಗುಚ್ಛವನ್ನು ಗಾಳಿಯಲ್ಲಿ ಅಲ್ಲಾಡಿಸಿದ ಒಡನೆಯೇ ಒಂದು ಕುದುರೆ ನನ್ನ ಮುಂದೆ ಬಂದು ನಿಂತಿದ್ದನ್ನು ಕಂಡೆನು. ನಾನು ಆ ಕುದುರೆಯನ್ನು ಏರಿದೆನು. ಅದು ನನ್ನನ್ನು ಒಂದು ಮರುಭೂಮಿಗೆ ಕರೆದುಕೊಂಡು ಹೋಯಿತು. ಬಾಯಾರಿಕೆಯಿಂದ ನನ್ನ ನಾಲಿಗೆ ಒಣಗಿಹೋಗಿತ್ತು. ದೇಹವೆಲ್ಲಾ ನಿತ್ರಾಣವಾಗಿತ್ತು. ಮರುಭೂಮಿಯನ್ನು ದಾಟಿ ಒಂದು ಸುಂದರವಾದ ಕಾಡಿಗೆ ಬಂದೆವು. ಕುದುರೆಯ ಮೇಲೆ ಕುಳಿತಿದ್ದ ನನ್ನನ್ನು ಬಳ್ಳಿಯೊಂದು ಸುತ್ತುವರಿದುಬಿಟ್ಟಿತು. ಕುದುರೆ ನನ್ನನ್ನು ಬಿಟ್ಟು ಓಡಿಹೋಯಿತು. ನನ್ನ ಕತ್ತು ಬಳ್ಳಿಗೆ ಸಿಕ್ಕಿಹಾಕಿಕೊಂಡಿತ್ತು. ಇಡೀ ರಾತ್ರಿ ನಾನು ಅತ್ತಿಂದಿತ್ತ ಹೊಯ್ದಾಡುತ್ತಿದ್ದೆನು. ರಾತ್ರಿಯ ಚಳಿಯಿಂದ ನಡುಗುತ್ತ ಕಾಲ ಕಳೆದೆನು.

''ಬೆಳಗಾಯಿತು. ಸೂರ್ಯೋದಯವೂ ಆಯಿತು. ಹೇಗೋ ಬಹಳ ಪ್ರಯತ್ನಪಟ್ಟು ನಾನು ಬಳ್ಳಿಯನ್ನು ಕತ್ತರಿಸಿ, ಬಂಧನದಿಂದ ಬಿಡಿಸಿಕೊಂಡೆ. ಒಬ್ಬಳು ಹುಡುಗಿ ಆಹಾರ, ನೀರನ್ನು ತೆಗೆದುಕೊಂಡು ಅತ್ತಕಡೆಯೇ ಬರುತ್ತಿದ್ದಳು. ನನಗೆ ಬಹಳ ಹಸಿವು; ವಿಪರೀತ ಬಾಯಾರಿಕೆ ಬೇರೆ. ಸ್ವಲ್ಪ ಆಹಾರವನ್ನು ಕೊಡಲು ಅವಳನ್ನು ಕೇಳಿಕೊಂಡೆ. ಆದರೆ ಅವಳು ಏನನ್ನೂ ಕೊಡಲಿಲ್ಲ. ಸುಮ್ಮನೆ ನಡೆದುಕೊಂಡು ಹೋಗುತ್ತಲೇ ಇದ್ದಳು. ನಾನು ಹಿಂಬಾಲಿಸುತ್ತಲೇ ಇದ್ದೆ. ಹೀಗೆಯೇ ಬಹುಕಾಲ ಕಳೆಯಿತು. ಕಡೆಗೊಮ್ಮೆ ಅವಳು ನನ್ನ ಕಡೆ ತಿರುಗಿ ನೋಡಿದಳು. ''ನಾನು ಚಾಂಡಾಲ ಜಾತಿಯವಳು. ನೀನು ನನ್ನನ್ನು ಮದುವೆಯಾಗುವೆಯೆಂದು ನನ್ನ ತಂದೆತಾಯಿಯರ ಎದುರು ಮಾತುಕೊಟ್ಟರೆ ನಿನಗೆ ಆಹಾರ, ನೀರು ಕೊಡುತ್ತೇನೆ'' ಎಂದಳು. ನನಗೋ ಹಸಿವು ಕಿತ್ತು ಬರುತ್ತಿತ್ತು. ಹಾಗೆಯೇ ಆಗಲೆಂದು ಮಾತುಕೊಟ್ಟೆ. ಅವಳು ತನ್ನಲ್ಲಿದ್ದ ಅರ್ಧಭಾಗ ಆಹಾರವನ್ನು ಕೊಟ್ಟಳು. ನೇರಳೆ ಹಣ್ಣಿನ ರಸವನ್ನೂ ಕೊಟ್ಟಳು.

''ಆಹಾರ ಸೇವಿಸಿದ ನಂತರ, ಆ ಹುಡುಗಿ ನನ್ನನ್ನು ತನ್ನ ತಂದೆಯ ಹತ್ತಿರ ಕರೆದುಕೊಂಡು ಹೋದಳು. ಅವಳು ನನ್ನನ್ನು ಮದುವೆಯಾಗಲು ಅನುಮತಿ ಕೇಳಿದಳು. ತಂದೆಯು ಒಪ್ಪಿದನು. ಅವಳು ನನ್ನನ್ನು ತನ್ನ ಕೊಠಡಿಗೆ ಕರೆದುಕೊಂಡು ಹೋದಳು. ನಮ್ಮಿಬ್ಬರಿಗಾಗಿ ಒಂದು ಗುಡಿಸಲು ನಿರ್ಮಾಣವಾಯಿತು. ಮದುವೆಯ ಸಮಾರಂಭ ಭಾರೀ ಆಡಂಬರದಿಂದ ನಡೆಯಿತು. ನನ್ನ ಮಾವನು ನನಗೆ ಬೆಲೆಬಾಳುವ ಬಟ್ಟೆ ಮತ್ತು ಇತರ ಪದಾರ್ಥಗಳನ್ನು ಬಳುವಳಿಯಾಗಿ ಕೊಟ್ಟನು. ಚಂಡಾಲ ಸಮುದಾಯವರು ಭೇರಿ ಬಾರಿಸುತ್ತ ಉತ್ಸವವನ್ನು ಆಚರಿಸಿದರು. ಮದುವೆ ಹೀಗೆ ಏಳು ದಿವಸಗಳ ಕಾಲ ಭವ್ಯವಾಗಿ ನಡೆಯಿತು.

''ಸ್ವಲ್ಪಕಾಲದಲ್ಲಿಯೇ ನನಗೊಬ್ಬಳು ಮಗಳು ಹುಟ್ಟಿದಳು. ಅವಳು ಬೆಳೆದು ದೊಡ್ಡವಳಾದಳು, ಮದುವೆಯಾದಳು. ಅವಳಿಗೊಬ್ಬ ಕಪ್ಪುಬಣ್ಣದ ಹುಡುಗ ಹುಟ್ಟಿದ. ಅವನೂ ಬೆಳೆದು ನಿಂತ. ಅವನಿಗೂ ಮದುವೆಯಾಯಿತು. ಅವನಿಗೂ ಒಬ್ಬಳು ಮಗಳು ಹುಟ್ಟಿದಳು. ಇಷ್ಟರೊಳಗೆ ನಾನು ಹಣ್ಣು ಹಣ್ಣು ಮುದುಕನಾದೆ. ಕುಟುಂಬ ನಿರ್ವಹಣೆಯಲ್ಲಿ ತಲೆದೋರುವ ನೂರಾರು ಆತಂಕಗಳು ನನ್ನ ದೇಹವನ್ನು ಜೀರ್ಣವಾಗಿಸಿದವು. ನಿಜವಾಗಿಯೂ ಮಕ್ಕಳು ಎನ್ನುವವರು ದುಃಖಕ್ಕೆ ಮೂಲಕಾರಣರೇ ಸರಿ! ಮಾನವ ಜೀವಿಗಳ ಸಂಕಷ್ಟವು ಹುಟ್ಟುವ ಮಗುವಿನ ರೂಪದಲ್ಲಿಯೇ ಉದ್ಭವಿಸುತ್ತದೆ!

''ಕಾಲ ಕಳೆದಂತೆ ನನ್ನ ದೈಹಿಕ ಮತ್ತು ಮಾನಸಿಕ ಶಕ್ತಿ ಉಡುಗಿತು. ಆ ಭೀಕರ ಕಾಡಿನ ಸೆಖೆಯಲ್ಲಿ ನಾನು ಬೆಂದು ಹೋದೆನು; ಚಳಿಗಾಲದ ಚಳಿಯಲ್ಲಿ ನಾನು ಮರಗಟ್ಟಿ ಹೋದೆನು. ಕೆಲಸ ಮಾಡಲು ಶಕ್ತಿ ಇರಲಿಲ್ಲ. ಹೇಗೋ ನಾನು ಹರಕಲು ಬಟ್ಟೆ ಉಟ್ಟು, ಮಣಗಟ್ಟಲೆ ಸೌದೆಯನ್ನು ಹೊತ್ತು ಜೀವನಯಾಪನೆ ಮಾಡುತ್ತಿದ್ದೆನು. ಬೇರುಗಳನ್ನು ತಿಂದು ಹಸಿವನ್ನು ಇಂಗಿಸಿಕೊಳ್ಳುತ್ತಿದ್ದೆನು. ಹೀಗೆ ನನ್ನ ಜೀವನದ ೬೦ ವರ್ಷಗಳು ಕಳೆದುಹೋದವು. ಆ ದೀರ್ಘಕಾಲವು ನೂರಾರು ಯುಗಗಳಂತೆ ಅನ್ನಿಸಿತು.

''ಒಮ್ಮೆ ನಮ್ಮ ಕಡೆ ಭೀಕರ ಬರಗಾಲ ಬಂತು. ಸಾವಿರಾರು ಜನರು ಹಸಿವಿನಿಂದ ಸತ್ತರು. ನಮ್ಮ ಕೆಲವು ಬಂಧುಗಳು ಮನೆಬಿಟ್ಟು ನಡೆದರು. ನಾನು ಮತ್ತು ನನ್ನ ಹೆಂಡತಿ ನಾವಿದ್ದ ಊರು ಬಿಟ್ಟೆವು. ಸುಡುತ್ತಿದ್ದ ಬಿಸಿಲಿನಲ್ಲಿ ನಡೆಯುತ್ತ ಹೋದೆವು. ಬಹಳಷ್ಟು ನಡೆದ ಮೇಲೆ ಒಂದು ಆಲದ ಮರದ ಬುಡವನ್ನು ತಲುಪಿದವು. ಅಲ್ಲಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡೆವು. ನನ್ನ ಹೆಂಡತಿ ನನ್ನ ಕಣ್ಣಮುಂದೆಯೇ, ಬಹು ನಿತ್ರಾಣಳಾಗಿ ಮರಣಹೊಂದಿದಳು. ನನ್ನ ಜೊತೆಗೆ ಇತರ ಬಂಧುಗಳೂ ಇದ್ದರು. ಅವರಲ್ಲಿ ಒಬ್ಬ ಹುಡುಗ, ವಿಪರೀತ ಹಸಿವಿನಿಂದ ನರಳುತ್ತಿದ್ದ. ಅವನು ಕಣ್ಣುಗಳಲ್ಲಿ ನೀರು ತುಂಬಿಕೊಂಡು ಅಂಗಲಾಚಿದ: ''ತಾತ, ನನಗೆ ತುಂಬ ಹಸಿವೆಯಾಗುತ್ತಿದೆ. ದಯವಿಟ್ಟು ತಿನ್ನಲು ಏನಾದರೂ ಕೊಡಿ. ಕುಡಿಯಲು ಸ್ವಲ್ಪ ನೀರು ಕೊಡಿ.'' ಎಲ್ಲಿಂದ ತಾನೇ ನಾನು ಅವುಗಳನ್ನು ತರಲಿ! ಅವನು ಮತ್ತೆ ಮತ್ತೆ ಅಂಗಲಾಚುತ್ತಲೇ ಇದ್ದ. ಹಸಿವೆಯಿಂದ ಸಾಯುತ್ತಿದ್ದ ಅವನನ್ನು ನೋಡಿ ನನಗೆ ಕರುಣೆ ಉಕ್ಕಿಬಂತು; ಹೃದಯ ತುಂಬಿಬಂತು. ಬೆಂಕಿಯಲ್ಲಿ ಬಿದ್ದು ಸತ್ತರೆ, ನನ್ನ ದೇಹದ ಮಾಂಸವನ್ನೇ ಅವನು ತಿಂದು ಬದುಕಿಕೊಳ್ಳುತ್ತಾನೆ ಎಂದು ನಾನು

ಯೋಚಿಸಿದೆನು. ಮರದ ಚೂರು, ತರಗೆಲೆಗಳನ್ನು ಕಲೆಹಾಕಿ ಬೆಂಕಿ ಹೊತ್ತಿಸಿದೆನು. ಎದ್ದುನಿಂತು, ಬೆಂಕಿಯಲ್ಲಿ ಹಾರಲು ಅನುವು ಮಾಡಿಕೊಂಡೆನು. ಇನ್ನೇನು ಹಾರಬೇಕು, ಹಾರಿಯೇ ಬಿಟ್ಟೆ!

''ನೋಡುತ್ತೇನೆ, ನಾನು ನನ್ನ ಸಿಂಹಾಸನದಿಂದ ಧುಮುಕಿದ್ದೇನೆ! ಸುತ್ತಲಿನವರೆಲ್ಲ 'ಜಯ, ಜಯ' ಎಂದು ನನಗೆ ಜಯಕಾರ ಮಾಡುತ್ತಿದ್ದಾರೆ! ಭೇರಿ, ಕೊಂಬುಗಳ ನಿನಾದ ಕೇಳಿಬರುತ್ತಿದೆ! ಆಗ ನನಗೆ ಗೊತ್ತಾಯಿತು, 'ನಾನು ರಾಜ ಲವಣ; ಚಾಂಡಾಲನಲ್ಲ' ಎಂದು. ನನಗೆ ಈಗ ಅರಿವಾಗಿದೆ, ಇದೆಲ್ಲಾ ಆ ಮಾಂತ್ರಿಕ ಸಿದ್ಧನ ಕೈಚಳಕ ಎಂದು. ಇಷ್ಟು ಕಾಲ ನನ್ನನ್ನು ಇಲ್ಲಸಲ್ಲದ ಕಷ್ಟ-ತಾಪ ತ್ರಯಗಳಿಗೆ ಸಿಲುಕಿಸಿದವನು ಅವನೇ ಎಂದು ಈಗ ನನಗೆ ಗೊತ್ತಾಗಿದೆ.''

ರಾಜನ ಮಾತುಗಳನ್ನು ಕೇಳುತ್ತಿದ್ದ ಮಂತ್ರಿಗಳು, ಸಭಿಕರು ಎಲ್ಲರೂ ಆ ಮಾಂತ್ರಿಕ ಸಿದ್ಧನೆಲ್ಲಿ ಎಂದು ಆ ಕಡೆ ಈ ಕಡೆ ನೋಡಿದರು. ಅವನಲ್ಲಿ ಯಾಕಾದರೂ ಇದ್ದಾನು? ತನ್ನ ಮಾಯೆ ಮುಗಿದ ಮೇಲೆ ಆ ಮಾಂತ್ರಿಕ ಮಂಗಮಾಯವಾಗಿದ್ದ!

ವಸಿಷ್ಠರು ಈ ಕಥೆಯ ಮರ್ಮವನ್ನು ರಾಮಚಂದ್ರನಿಗೆ ಹೀಗೆ ವಿವರಿಸಿದರು: ''ಅಪ್ಪಾ ರಾಮಚಂದ್ರ, ಆ ಮಾಂತ್ರಿಕ ಸಿದ್ಧ ಯಾರೆಂದುಕೊಂಡೆ? ಅವನೇ ದಿವ್ಯಮಾಯೆ. ಈ ಕಥೆ ಏನನ್ನು ತಿಳಿಸುತ್ತದೆ ಗೊತ್ತೆ? 'ಈ ವಿಶ್ವವೆಲ್ಲವೂ ಮನಸ್ಸೇ ಆಗಿದೆ' ಎಂದು. ಪರಬ್ರಹ್ಮನೇ ಮನಸ್ಸು ಮತ್ತು ಜಗತ್ತಿನ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಾನೆ.

''ರಾಮ, ನೀನು ನೋಡುವುದೆಲ್ಲವೂ ಚೈತನ್ಯದ ಅಭಿವ್ಯಕ್ತಿಯೇ ಆಗಿದೆ. ಕಾಲವೆಂಬುದು ಮನಸ್ಸಿನ ಒಂದು ಬಗೆ, ಅಷ್ಟೆ. ಕನಸಿನಲ್ಲಿ ನೀನು ಒಂದು ನೂರು ವರ್ಷಗಳ ಕಾಲದಲ್ಲಿ ಆಗುವುದನ್ನು ಕೇವಲ ಐದು ನಿಮಿಷಗಳಲ್ಲಿ ಅನುಭವಿಸಿಬಿಡುತ್ತೀಯೆ, ಅಲ್ಲವೆ! ಮನಸ್ಸು ಸಮಾಹಿತವಾಗಿದ್ದರೆ, ಅಂದರೆ ಏಕಾಗ್ರಗೊಂಡಿದ್ದರೆ, ಒಂದು ಗಂಟೆಯಷ್ಟು ಕಾಲ ಐದು ನಿಮಿಷದ ಹಾಗೆ ಕಳೆದುಹೋಗುತ್ತದೆ. ಮನಸ್ಸು ಏಕಾಗ್ರವಾಗದಿದ್ದರೆ, ಹತ್ತು ನಿಮಿಷವೂ ಮೂರು ಗಂಟೆಗಳಂತೆ ದೀರ್ಘವಾಗಿ ಕಾಣುತ್ತದೆ. ಈ ರೀತಿಯ ಅನುಭವವನ್ನು ಜಗತ್ತಿನಲ್ಲಿ ಎಲ್ಲರೂ ಕಂಡೇ ಇರುತ್ತಾರೆ. ಅದೇ ರೀತಿ ರಾಜ ಲವಣನು ಕೂಡ ಅರುವತ್ತು ವರ್ಷಗಳ ದೀರ್ಘಕಾಲದ ಜೀವಿತವನ್ನು ಎರಡೇ ಗಂಟೆಗಳಲ್ಲಿ ಅನುಭವಿಸಿಬಿಟ್ಟನು!

''ರಾಮಚಂದ್ರ, ರಾಜ ಲವಣನೆಂಬುವವನು ಯಾರೆಂದುಕೊಂಡೆ? ಅವನು ಎಲ್ಲ ಜೀವರಾಶಿಗಳನ್ನೂ ಪ್ರತಿನಿಧಿಸುತ್ತಾನೆ. ಅವನ ಹಾಗೆಯೇ ಭವದ ಬವಣೆಯನ್ನು ಅಜ್ಞಾನಿ ಜೀವರು ಅನುಭವಿಸುತ್ತಿದ್ದಾರೆ. ಅವರೆಲ್ಲರೂ ಆಸೆಗಳಿಗೆ ದಾಸರು; ಅಹಂಕಾರ, ಮಮಕಾರಗಳಿಗೆ ಮಾರುಹೋದವರು.

''ರಾಮ, ಈ ಜಗತ್ತೆಂಬುದು ಭಗವಂತನ ಅನಂತ ಶಕ್ತಿಯ ಲೀಲಾಸ್ಥಾನ. ಇಲ್ಲಿನ ಜೀವಿಗಳೆಲ್ಲರೂ ಅದರಿಂದ ಮೋಹಿತರಾದವರು. ಹಾಗೆಂದೇ ಅವರು ಅಸತ್ಯವಾದ ಈ ಜಗತ್ತನ್ನು ಸತ್ಯವೆಂದು ತಿಳಿಯುತ್ತಾರೆ. ಸತ್ಯವಾದದ್ದನ್ನು ಅಸತ್ಯವೆಂದು ತಿಳಿಯುತ್ತಾರೆ. ಮರವೊಂದು ಕೊಂಬೆ-ರೆಂಬೆಗಳಿಂದ ಕೂಡಿಕೊಂಡು ಬೆಳೆಯುತ್ತಾ ಹೋಗುತ್ತದಲ್ಲವೆ? ಹಾಗೆಯೇ ಮನಸ್ಸು ಕೂಡ ವಿಕಾಸವಾಗುತ್ತ, ವಿವಿಧ ರೀತಿಯ ಕಲ್ಪನೆಗಳನ್ನು ಮಾಡಿಕೊಳ್ಳುತ್ತ ಹೋಗುತ್ತದೆ.

''ರಾಮ, ಮನಸ್ಸಿನ ಸಂಕಲ್ಪಗಳು ಕಲ್ಪನೆಗಳಲ್ಲದೆ ಬೇರೆಯಲ್ಲ. ಆದ್ದರಿಂದ ಅವುಗಳನ್ನು ಬೇರು ಸಹಿತ ನಾಶಪಡಿಸು. ಹೀಗೆ ಮನಸ್ಸನ್ನು ಶಿಸ್ತುಬದ್ಧಗೊಳಿಸಲು ಸಾಧ್ಯವಾದರೆ, ನಿಧಾನವಾಗಿ ಮನಸ್ಸು ನಿನ್ನ ಹತೋಟಿಗೆ ಬರುತ್ತದೆ. ಹಾಗೆ ಮಾಡಲು ನೀನು ವಿವೇಕ, ವಿಚಾರ, ವೈರಾಗ್ಯ ಮತ್ತು ನಿಯತ ಆತ್ಮಧ್ಯಾನಗಳೆಂಬ ಸಾಧನೆಗಳನ್ನು ಕೈಗೊಳ್ಳಬೇಕು. ಹಾಗೆ ಮಾಡಿದರೆ ಮಾತ್ರ ಮಾಯೆಯ ಬಂಧನದಿಂದ ಪಾರಾಗಬಲ್ಲೆ, ಅನಂತ ಚೈತನ್ಯದ ಪರಮ ಆನಂದವನ್ನು ಪಡೆಯಬಲ್ಲೆ.'' ✷

## ಸ್ವಾಭಿಮಾನ

ಅಂಗದನು ಶ್ರೀರಾಮನ ಸಂದೇಶವನ್ನು ಹೊತ್ತು ರಾಜದೂತನಾಗಿ ಲಂಕೆಗೆ ಹೋದ. ಆಗ ಅವನ ವಯಸ್ಸು ಕೇವಲ ಇಪ್ಪತ್ತನಾಲ್ಕು. ಅವನನ್ನು ನೋಡಿ ರಾವಣನಿಗೆ ನಗು ಉಕ್ಕಿಬಂತು. ಅವನು ಹೇಳಿದ, ''ಬಹುಶಃ ರಾಮನ ಸೈನ್ಯದಲ್ಲಿ ಗಡ್ಡ-ಮೀಸೆ ಬಂದವರಾರೂ ಇಲ್ಲವೆಂದು ಕಾಣುತ್ತದೆ. ಒಬ್ಬ ಬಾಲಕನನ್ನು ಸಂಧಾನಕ್ಕೆ ಕಳುಹಿಸಿ ಕೊಟ್ಟಿದ್ದಾನೆ.'' ಅಂಗದನ ಸ್ವಾಭಿಮಾನಕ್ಕೆ ಏಟು ಬಿತ್ತು. ಅವನು ಉತ್ತರ ನೀಡುತ್ತ, ''ರಾವಣನಂತಹ ತಿಳುವಳಿಕೆಯುಳ್ಳವನು ಕೂಡ ವ್ಯಕ್ತಿಯ ಆಕಾರ, ವೇಷ ನೋಡಿ ಅವನ ಯೋಗ್ಯತೆಯನ್ನು ಅಳೆಯುತ್ತಾನೆ ಎಂದು ಗೊತ್ತಿದ್ದಿದ್ದರೆ, ಭಗವಾನ್ ಶ್ರೀರಾಮಚಂದ್ರನು ಖಂಡಿತವಾಗಿಯೂ ನನ್ನ ಬದಲಿಗೆ ಒಂದು ದಢೂತಿ ಕುರಿಯನ್ನು ಕಳುಹಿಸಿ ಕೊಡುತ್ತಿದ್ದ'' ಎಂದ.

ಈ ಮಾತನ್ನು ಕೇಳಿ 'ಈ ಹುಡುಗ ಕೇವಲ ಹುಡುಗನಲ್ಲ'ವೆಂಬುದು ರಾವಣನಿಗೆ ಅರ್ಥವಾಯಿತು. ಇದನ್ನು ಚೆನ್ನಾಗಿ ತಿಳಿದೇ ಅವನನ್ನು ಇಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ ಎಂದು ಅವನು ಅರಿತುಕೊಂಡ.

*(ಹಿಂದಿಮೂಲ: 'ಪ್ರೇರಕ ಪ್ರಸಂಗ')*

# ರಥದಿಂದ ಯಾರು ಇಳಿಯಬೇಕು

ಮೂಲ: **ಮಹಾಭಾರತ** ಕಥೆ: **ಸುಂದರಿ ಸುಂದರಂ** ಚಿತ್ರ: **ಶಂಕರ್**

**1** ಅಷ್ಟಕ, ಪ್ರತರ್ದನ, ವಸುಮನಸ್ಸು ಹಾಗೂ ಶಿಬಿ – ಇವರು ನಾಲ್ಕುಜನ ಯಯಾತಿ ರಾಜನ ಮಕ್ಕಳು. ತಮ್ಮ ಸತ್ಕರ್ಮಗಳಿಂದಲೂ, ಉತ್ತಮ ರಾಜ್ಯಭಾರದಿಂದಲೂ ಅವರು ದಿವ್ಯವಾದ ಒಂದು ರಥವನ್ನು ಉಡುಗೊರೆಯಾಗಿ ಪಡೆದರು. ಒಂದು ಸಲ ಅವರು ರಥವನ್ನು ಏರುವ ವೇಳೆಗೆ ದೇವರ್ಷಿ ನಾರದರು ಅಲ್ಲಿಗೆ ಬಂದರು.

ಮಹರ್ಷಿಗಳೆ, ಸ್ವಾಗತ! ದಯವಿಟ್ಟು ನಮ್ಮೊಂದಿಗೆ ರಥದಲ್ಲಿ ಬನ್ನಿ. ಅದರಿಂದ ನಾವು ಕೃತಾರ್ಥರಾಗುವೆವು.

ನಾರಾಯಣ! ನಾರಾಯಣ! ಹಾಗೆಯೇ ಆಗಲಿ.

**2** ಅವರು ದೇವಲೋಕ, ಬ್ರಹ್ಮಲೋಕವೇ ಮೊದಲಾದ ಲೋಕಗಳನ್ನು ಸಂದರ್ಶಿಸಿದರು.

ದೇವರ್ಷಿಗಳೆ! ಒಂದು ವೇಳೆ ಈ ರಥದಲ್ಲಿ ನಾಲ್ವರಿಗೆ ಮಾತ್ರ ಸ್ಥಳವಿರುತ್ತಿದ್ದರೆ, ನಾವು ಐದು ಜನರಲ್ಲಿ ಒಬ್ಬರು ಇಳಿಯಬೇಕು. ಯಾರು ಇಳಿಯಬೇಕು, ಹೇಳಿ?

ಅಷ್ಟಕನೇ ಇಳಿಯಬೇಕು. ಏಕೆಂದರೆ ...

**3** ಅಷ್ಟಕ, ಈ ಗೋವುಗಳೆಲ್ಲ ಯಾರವು?

ಇನ್ನಾರವು, ಋಷಿಗಳೆ? ಅವೆಲ್ಲ ನನ್ನವು, ಏಕೆಂದರೆ ನಾನೇ ಅವನ್ನೆಲ್ಲ ದಾನವಾಗಿ ಕೊಟ್ಟಿದ್ದೆ.










ಇಬ್ಬರು ಬ್ರಾಹ್ಮಣರೂ ಒಂದೊಂದು ಕುದುರೆಗಳನ್ನು ತೆಗೆದುಕೊಂಡು ಹೋದರು.















ಆ ಬ್ರಾಹ್ಮಣ ತನ್ನ ಅರಮನೆ ಹಾಗೂ ಬೊಕ್ಕಸಕ್ಕೆ ಬೆಂಕಿಯಿಡುತ್ತಿದ್ದ. ಆಗ ರಾಜಭಟರು ಅವನನ್ನು ಅಟ್ಟಿಸಿಕೊಂಡು ಬರುತ್ತಿದ್ದರು.

**12**



ಮಹಾರಾಜ! ಆ ಬ್ರಾಹ್ಮಣ
ನಿಮ್ಮ ಅರಮನೆಗೆ ಬೆಂಕಿಯಿಟ್ಟ!

ಸರಿಯಾದ ಸಮಯಕ್ಕೆ ಸೈನಿಕರು ಬೆಂಕಿಯನ್ನು ನಂದಿಸಿದರು.

**13**

ಪೂಜ್ಯ ಬ್ರಾಹ್ಮಣರೆ! ದಯವಿಟ್ಟು ಈ ಆಹಾರವನ್ನು ಸ್ವೀಕರಿಸಿ. ನೀವು ಹೇಳಿದ ಪ್ರಕಾರವೇ ನಾನು ಅಡುಗೆ ಮಾಡಿ ತಂದಿದ್ದೇನೆ.



ರಾಜ, ಅದನ್ನು ನೀನೇ ಮೊದಲು ಊಟ ಮಾಡಬೇಕು.

**14**

ಒಂದು ಕ್ಷಣ ಶಿಬಿ ಹಿಂಜರಿದ. ಅವನು ಕಣ್ಣೀರಿಳಿಸುತ್ತಾ ಬ್ರಾಹ್ಮಣನ ಆಣತಿಯಂತೆ ಅದನ್ನು ಊಟ ಮಾಡಲು ಯತ್ನಿಸಿದ.



ನಿಲ್ಲು, ಶಿಬಿ ಮಹಾರಾಜ! ನೀನು ನನ್ನ ಪರೀಕ್ಷೆಯಲ್ಲಿ ಗೆದ್ದೆ. ನಿಜವಾಗಿಯೂ ನೀನು ಸಹನೆಯ ಸಾಕಾರಮೂರ್ತಿಯಾಗಿರುವೆ. ನಿನಗೆ ದೀರ್ಘಾಯುವಾಗಲಿ ಎಂದು ನಾನು ಆಶೀರ್ವದಿಸುತ್ತೇನೆ. ನಿನ್ನ ಮಗನೂ ಜೀವಂತವಾಗುವನು.

**15**

ಆ ಬ್ರಾಹ್ಮಣ ಮಾಯವಾದ. ಸಾಕ್ಷಾತ್ ಶಿವನೇ ಬ್ರಾಹ್ಮಣನ ರೂಪದಲ್ಲಿ ಬಂದಿದ್ದ. ಅವನು ಶಿಬಿಯ ಮುಂದೆ ಪ್ರತ್ಯಕ್ಷನಾದ. ರಾಜಕುಮಾರನು ಜೀವಂತನಾಗಿ ಮರಳಿದ್ದನ್ನು ಕಂಡ ಜನರೆಲ್ಲ ಶಿಬಿಯ ಗುಣಗಾನ ಮಾಡಿದರು.

ಓ ಮಹಾರಾಜ! ಒಬ್ಬ ಸಾಧುವಿನ ಸತ್ಕಾರ ಮಾಡಲು ನೀನು ನಿನ್ನ ಮಗನನ್ನೇ ಅಡುಗೆ ಮಾಡಿದೆ!



ನಾನು ಲಾಭ, ಕೀರ್ತಿಗಳಿಗೋಸ್ಕರ ಸಾಧುಸೇವೆ ಮಾಡುವುದಿಲ್ಲ. ಅವರ ಬಯಕೆಯೇನೋ ಅದನ್ನೇ ಮಾಡುತ್ತೇನೆ.

**16**



ಓ ರಾಜರುಗಳೇ! ನಿಮ್ಮ ನಡುವೆ ಯಾರು ಶ್ರೇಷ್ಠರೆಂದು ನಿಮಗೆ ಈಗ ಅರ್ಥವಾಯಿತೆ?
ಶಿಬಿಯೇ ನಮ್ಮಲ್ಲಿ ಶ್ರೇಷ್ಠನಾದವನು. ಶಿಬಿ ಚಿರಕಾಲ ಬಾಳಲಿ!

ಸುದ್ದಿ ಸಂಚಯ






# ‘ಪ್ರಬುದ್ಧ ಕೇರಳಂ’ ಪತ್ರಿಕೆಯ ಶತಮಾನೋತ್ಸವದ ಉದ್ಘಾಟನೆ

**ಕೇ**ರಳದ ತ್ರಿಶೂರ್ ರಾಮಕೃಷ್ಣ ಮಠದಿಂದ ಪ್ರಕಟವಾಗುತ್ತಿರುವ ರಾಮಕೃಷ್ಣ ಮಹಾಸಂಘದ ಮಲೆಯಾಳಂ ಮಾಸಪತ್ರಿಕೆ **‘ಪ್ರಬುದ್ಧ ಕೇರಳಂ’** ಆರಂಭವಾಗಿ ನೂರು ವರ್ಷಗಳು ಸಂದಿವೆ. ಒಂದು ವರ್ಷದುದ್ದಕ್ಕೂ ಜರಗಲಿರುವ ಇದರ ಶತಮಾನೋತ್ಸವದ ಉದ್ಘಾಟನೆಯು ಇತ್ತೀಚೆಗೆ ತ್ರಿಶೂರಿನ ಪುರನಾಟ್ಟುಕರದಲ್ಲಿರುವ ರಾಮಕೃಷ್ಣ ಮಠದಲ್ಲಿ ನಡೆಯಿತು. ಏರ್ಣಾಕುಲದಲ್ಲಿರುವ ನಾರಾಯಣ ಗುರುಕುಲದ ಮುಖ್ಯಸ್ಥರಾದ ಗುರುಮುನಿ ನಾರಾಯಣ ಪ್ರಸಾದ್ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ರಾಮಕೃಷ್ಣ ಮಠ ಹಾಗೂ ಮಿಷನ್ನಿನ ಟ್ರಸ್ಟಿಗಳಾದ ಪೂಜ್ಯ ಸ್ವಾಮಿ ಅಭಿರಾಮಾನಂದಜಿ ಮಹಾರಾಜ್ ಅಧ್ಯಕ್ಷತೆ ವಹಿಸಿದ್ದರು.

ಈ ಸಂದರ್ಭದಲ್ಲಿ ಮಲಬಾರ್ ಕ್ಯಾಥೋಲಿಕ್ ಚರ್ಚ್‌ನ ಮುಖ್ಯಸ್ಥರಾದ ಕಾರ್ಡಿನಲ್ ಮಾರ್‌ಜಾರ್ಜ್ ಆಲಂಚೇರಿ ಪ್ರವಚನ ನೀಡಿದರು. ಇಸ್ಲಾಮಿಕ್ ವಿದ್ವಾಂಸರೂ, ಮುಖಂಡರೂ ಆದ ಪನಕ್ಕಾರ್ ಸಯೀದ್ ಮುನಿವರಲಿ ಸಾಹಿಬ್ ತಂಗಳ್, ಖ್ಯಾತ ಇತಿಹಾಸ ತಜ್ಞರೂ, ಇಂಡಿಯನ್ ಹಿಸ್ಟರಿಕ್ ಕೌನ್ಸಿಲ್‌ನ ಮಾಜಿ ಅಧ್ಯಕ್ಷರೂ ಆದ ಜಿ.ಎಸ್. ನಾರಾಯಣನ್ ಹಾಗೂ ಕಲ್ಲಿಕೋಟೆ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳೂ ಇತಿಹಾಸ ತಜ್ಞರೂ ಆದ ಡಾ. ಕೆ.ಕೆ.ಎನ್. ಕುರುಪ್, ಆರ್.ಎಸ್.ಎಸ್. ಮುಖಂಡರಾದ ಶ್ರೀ ಆರ್. ಹರಿ, ಅಡಾತ್ ಗ್ರಾಮ ಪಂಚಾಯಿತಿಯ ಅಧ್ಯಕ್ಷರಾದ ಶ್ರೀಮತಿ ಜಯಲಕ್ಷ್ಮಿ ಟೀಚರ್ ಮೊದಲಾದವರು ಕಾರ್ಯಕ್ರಮದಲ್ಲಿ ಭಾಗವಹಿಸಿದರು. ಪತ್ರಿಕೆಯ ಸಂಪಾದಕರಾದ ಸ್ವಾಮಿ ನಂದಾತ್ಮಜಾನಂದರು ಸ್ವಾಗತ ಭಾಷಣ ಮಾಡಿದರು. ತ್ರಿಶೂರ್ ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ವ್ಯೋಮಾತೀತಾನಂದಜಿ ವಂದನಾರ್ಪಣೆ ಮಾಡಿದರು.

ಶ್ರೀ ಪರಮೇಶ್ವರನ್ ಮೂಳಿಕುಲಂ ಅವರಿಂದ ವೇಣುವಾದನ, ಡಾ. ಎಡನಾಡ್ ರಾಜನ್ ನಂಬಿಯಾರ್ ಅವರಿಂದ **‘ಶ್ರೀರಾಮಕೃಷ್ಣನ್’** ಎಂಬ ಚಾಕ್ಯಾರ್‌ಕೂತ್ತು (ಗೀತ ನಾಟಕ) ಪ್ರದರ್ಶನ ಇವು ಈ ಕಾರ್ಯಕ್ರಮದ ವಿಶೇಷ ಆಕರ್ಷಣೆಯಾಗಿತ್ತು.

ಕೇರಳದ ಪ್ರಧಾನ ದಿನಪತ್ರಿಕೆಗಳಾದ **‘ಮಾತೃಭೂಮಿ’** ಮತ್ತು **‘ಮಲೆಯಾಳ ಮನೋರಮ’** ತಮ್ಮ ಸಂಪಾದಕೀಯದಲ್ಲಿ ‘ಪ್ರಬುದ್ಧ ಕೇರಳಂ’ ಪತ್ರಿಕೆಯುನ್ನು ಕುರಿತು ಬರೆದುದು ಕೇರಳದ ಓದುಗರಲ್ಲಿ ಪತ್ರಿಕೆಯ ಬಗ್ಗೆ ಅರಿವು ನೀಡುವಂತೆ ಮಾಡಿತ್ತು. ಕಮಿಟಿ ಸಭೆಯಲ್ಲಿ ತ್ರಿಶೂರು ರಾಮಕೃಷ್ಣ ಮಠದಲ್ಲಿ ಅಖಿಲ ಕೇರಳ ಭಕ್ತ ಸಮ್ಮೇಳನವನ್ನು ೨೦೧೬ರಲ್ಲಿ ನಡೆಸಲು ಹಾಗೂ ಶತಮಾನೋತ್ಸವದ ಅಂಗವಾಗಿ ವಿವಿಧ ಕಾರ್ಯಕ್ರಮಗಳನ್ನು ನಡೆಸಲು ತೀರ್ಮಾನಿಸಲಾಯಿತು.








Managing Editor : Swami Muktidananda
Editor : Swami Jnanayoganananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

VIVEKA PRABHA (KANNADA MONTHLY)
August 2015, Vol.16, No.08, No. of pages : 44

Registered With Registrar of News Papers Of India under 72356/2000.postal Regn.No.KA/SK/MYS/480/ 2015-17. LICENCED TO POST W.P.P.AT YADAVAGIRI MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore